

ಒಂದೆ ಸಾಕೆನಗೆ ನಿನ್ನಯ ಸೇವೆ
ಯೊಂದೆ ಸಾಕೆನಗೆ
ಒಂದೆ ಸಾಕು ನಿನ್ನಯ ಸೇವೆ ನಿರತವು
ಮಂದರಧರ ಶ್ರೀ ವೆಂಕಟರಮಣನೆ

ದೇವಕಿ ನಂದನೆನೆ ಎನ್ನನು ನೀ
ಕಾವ ಕೃಪಾಕರನೆ
ಭಾವಜನಯ್ಯನೆ ಭಾನುಪ್ರಕಾಶನೆ
ದೇವರದೇವ ಶ್ರೀ ವೆಂಕಟರಮಣನೆ

ವಾರಿಧಿ ರೂಪಾದ ಭವದೊಳು ಮುಳುಗಿ
ದಾರಿಗಾಣದೆಯಿಹೆನು
ತೋರಿಸಿ ದಾರಿಯ ಜ್ಞಾನದ ನಾವೆಯಿಂ
ಸೇರಿಸು ತಡಿಯ ಶ್ರೀ ವೆಂಕಟರಮಣನೆ

ತಿರುಪತಿಯಿಂದ ಬಂದು ತರುಣ ನಾಗ
ಪುರದೊಳು ಗುರುರೂಪದಲಿ
ಕರುಣದಿಂದ ನಾರಾಯಣದಾಸನಿಗೆ ಬೇಗ
ಸ್ಥಿರಸುಖವೀವ ಶ್ರೀ ವೆಂಕಟರಮಣನೆ.

—ನಾರಾಯಣ ದಾಸರು

# ಒದುಗರ ಓಲೆ

ಸ್ವಾಮಿ ;

ಸೆಪ್ಟೆಂಬರ್ ತಿಂಗಳ ಗೃಹಲಕ್ಷ್ಮಿ ವಿಭಾಗದ ಸಾವಿತ್ರಿ ಲೇಖನ ತುಂಬ ಸ್ವಾರಸ್ಯವಾಗಿದ್ದಿತು. ಅರ್ಥಗರ್ಭಿತವಾಗಿದ್ದಿತು. ಇಂತಹ ಲೇಖನವನ್ನು ಪ್ರಕಟಿಸಿದ ತಮಗೂ ಬರೆದು ಸಾದರ ಪಡಿಸಿದ ಲೇಖಕ ರಘುಸುತ ಅವರಿಗೂ ನಮ್ಮ ವಂದನೆಗಳು.

ಸೂರ್ಯನಾರಾಯಣ ಜೋಯ್ಸ ಶಿವಮೊಗ್ಗ

ಮಾನ್ಯರೆ ;

ವಿವಿಧ ವರ್ಣಗಳಿಂದ ಕೂಡಿ ಆಕರ್ಷಕವಾಗುವಂತೆ ಇದ್ದ ಸಪ್ತಗಿರಿಯ ಹೊದಿಕೆ ತೆಳ್ಳಗೂ ಬೆಳ್ಳಗೂ ಏಕೆ ಸೊರಗಿತು ಸೆಪ್ಟಂಬರಿನಲ್ಲಿ. ಶ್ರೀ ವೆಂಕಟೇಶ್ವರಸ್ವಾಮಿಯ ರಥೋತ್ಸವ ಗರುಡೋತ್ಸವಗಳ ಚಿತ್ರಗಳು ಅಚ್ಚುಕಟ್ಟಾಗಿದ್ದರೂ ಹಳದಿಯ ಹಿನ್ನೆಲೆಯಲ್ಲಿ ಹೊಳಪು ಕಳೆದುಕೊಂಡಿವೆ.

ಶ್ರೀನಿವಾಸನ್ ಬೆಂಗಳೂರು.

ಸ್ವಾಮಿ;

ಸಪ್ತಗಿರಿ ವರ್ಣಮಯ ರಕ್ಷಾಪುಟ ಹೊಂದಿ, ಹಿಂದುಗಳಾಗಿ ಹಿಂದೂಧರ್ಮದ ಬಗ್ಗೆ ನಾವು ತಿಳಿಯಬೇಕಾದ ಅನೇಕ ವಿಷಯಗಳ ಬಗ್ಗೆ ಆಸಕ್ತಿ ತರಿಸುವಂತೆ ಬರುತ್ತಿದೆ.

ಸೆಪ್ಟೆಂಬರ್ ತಿಂಗಳಿನ 'ಸುಡುವುದು-ಬಿಡುವುದು' ಕಥೆ ಉತ್ತಮ ವಿಚಾರದಿಂದ ಕೂಡಿದೆ.

ಆಳವಾದ ವಿಚಾರ ಪೂರಿತವಾದ ಸಂಪಾದಕೀಯದೊಡನೆ ಬರುವ ಸಪ್ತಗಿರಿಯನ್ನು ನಿರೀಕ್ಷಿಸುತ್ತ ಇರುತ್ತೇವೆ. ತಾವು ಅದನ್ನು ಬೇಗ ಕಳಿಸುವ ಏರ್ಪಾಡು ಮಾಡಿದರೆ ಸಂತೋಷ.

ಕುಮಾರಿ ಅನಂತಲಕ್ಷ್ಮಿ,
ಕುಮಾರಿ ಜಯಲಕ್ಷ್ಮಿ ಶಿವಮೊಗ್ಗ

ಮಾನ್ಯರೆ ;

ಸೆಪ್ಟೆಂಬರ್ ಸಪ್ತಗಿರಿ ತಡವಾದರೂ ಸೇರಿದೆ. ಆದ್ಯರಾಮಾಚಾರ್ಯರ ಶಿಲ್ಪ ಸಂಗೀತ ಇನ್ನೂ ವಿವರವಾಗಿರಬೇಕಿತ್ತು ಎನ್ನಿಸುವಷ್ಟು ಬೇಗ ಮುಗಿದಿದೆ. ಇಂತಹ ಲೇಖನಗಳು ಹೆಚ್ಚಿಗೆ ಬರಲಿ.

ರಾಮಚಂದ್ರ ಗುಲ್ಬರ್ಗ




ಸಂಪುಟ ೧೫] ನವಂಬರ್ ೧೯೮೪ [ಸಂಚಿಕೆ ೬


# ವಿಷಯಸೂಚಿ




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥

# ಸಂಪಾದಕೀಯ

ಮಾನವನಲ್ಲಿನ ಮೃಗ ಮತ್ತೊಮ್ಮೆ ತಲೆಯೆತ್ತಿ ಮಾನವೀಯತೆಯ ಕಗ್ಗೊಲೆ ನಡೆಸಿದೆ. ದೇಶವೆಲ್ಲ ದಿಗ್ಭ್ರಮೆಯಲ್ಲಿ ಮುಳುಗಿ, ಯಾಕೆ ಹೀಗಾಯಿತು? ಹೀಗೆ ಆಗಬೇಕಾಗಿತ್ತೆ ಎಂಬ ಪ್ರಶ್ನೆಗಳಲ್ಲಿ, ಸಿಲುಕಿದೆ. ಆಗಬೇಕಿರಲಿಲ್ಲ; ನಮ್ಮ ಋಷಿ ಮುನಿಗಳ – ಪರಂಪರಾಗತ ಅನುಭಾವಿಗಳ ಆದರ್ಶಮಯ ಜೀವನ ಸಾಹಿತ್ಯ ದಂತೆ. ಅಹಂಕಾರ ಮಮಕಾರ, ಭಯಗಳಿಂದಾಗಿ ಮನುಷ್ಯನ ಇತರತ್ರ ಶ್ರೇಷ್ಠ ಗುಣಗಳು ಮಸುಳಿಸಿ ಪ್ರಪಂಚದ ಒಂದು ಮಹದ್ವ್ಯಕ್ತಿಯನ್ನು ಬಲಿಗೊಂಡಿದೆ.

ಶ್ರೀಮತಿ ಇಂದಿರಾಗಾಂಧಿಯವರು ಕೇವಲ ಭಾರತದ ಪ್ರಧಾನಿ ಮಾತ್ರವೇ ಆಗಿರಲಿಲ್ಲ. ನಮ್ಮ ಪರಂಪರಾಗತ ಮೌಲ್ಯಗಳಿಗೆ ಅನುಗುಣವಾದ ಅಲಿಪ್ತ ರಾಷ್ಟ್ರಗಳ ನಾಯಕಿಯೂ ಆಗಿದ್ದರು. ವಿಶ್ವದ ಹಿಂಸಕ ಶಕ್ತಿಗಳ ವಿರುದ್ಧ ಶಾಂತಿ ಸಂದೇಶವನ್ನು ಹೊತ್ತು ನಡೆದಿದ್ದರು. ಮೇಲಾಗಿ ಸ್ತ್ರೀ ಶಕ್ತಿಯ ಸಂಕೇತವೂ ಆಗಿದ್ದರು. ಅಂತಹವರನ್ನು ಇನ್ನಿಲ್ಲವೆನ್ನಿಸುವುದು ಕಷ್ಟವೇ, ಕಾರಣ ಅಬ್ರಹಾಂ ಲಿಂಕನ್, ಮಾರ್ಟಿನ್ ಲೂಥರ್ ಕಿಂಗ್, ಮಹಾತ್ಮ ಗಾಂಧಿ, ಶ್ರೀಮತಿ ಇಂದಿರಾಗಾಂಧಿ ಮೊದಲಾದ ಹುತಾತ್ಮರೆಲ್ಲ ಕೇವಲ ಭೌತಿಕ ಕಾಯಸ್ಥರಾಗಿ ಮಾತ್ರವೇ ಆಗಿರದೆ, ಒಂದು ತತ್ತ್ವ, ಒಂದು ಆದರ್ಶ, ಒಂದು ಸಂಕೇತವೂ ಆಗಿರುವುದೇ ಆಗಿದೆ.

ಇಲ್ಲಿ ನಾವು ಗಮನಿಸಿ ತಿಳಿಯಬೇಕಾದದ್ದು ಎಂದರೆ ಹಿಂಸೆಯಿಂದ ಯಾವ ಸಮಸ್ಯೆಯನ್ನೂ ಪರಿಹರಿಸ ಲಾಗದು ಎಂಬುದನ್ನು; ಅಹಿಂಸಾ ಪರಮೋಧರ್ಮಃ ಎಂದು ನಡೆದ ಅಶೋಕ, ಬುದ್ಧ, ಗಾಂಧಿಯರ ನಾಡಿನಲ್ಲಿ ಒಬ್ಬ ಪ್ರಧಾನಿಯನ್ನು ಆಕೆಯ ಅಂಗರಕ್ಷಕರೇ ಹತ್ಯೆ ಮಾಡಿದರು ಎಂಬುವನ್ನು ನೆನಪಿಟ್ಟುಕೊಂಡು ಇಲ್ಲಿನ ಮೂಲಭೂತವಾದ ಭಯ, ಅಪನಂಬಿಕೆ ಮೊದಲಾದ ದುರ್ಗುಣಗಳನ್ನು ಕಳೆದುಕೊಳ್ಳಲು ಪ್ರಯತ್ನಿಸ ಬೇಕೆಂಬುದನ್ನು.

ಶ್ರೀಮತಿ ಇಂದಿರಾಗಾಂಧಿಯವರು ತಮ್ಮ 16 ವರ್ಷಗಳ ಪ್ರಧಾನಿ ಪದದಲ್ಲಿ ದೇಶವನ್ನು ಏಕತೆಯ ಕಡೆಗೆ ಅಭಿವೃದ್ಧಿಯ ಕಡೆಗೆ ಕೊಂಡೊಯ್ಯಲು ಅಹರ್ನಿಶಿ ಪ್ರಯತ್ನಿಸಿದರೆಂಬುದೂ, ಅದೇ ಪ್ರಯತ್ನದಲ್ಲಿಯೇ ಹುತಾತ್ಮರಾದರೆಂಬುದೂ ಸರ್ವವೇದ್ಯ. ಅವರ ಆತ್ಮಕ್ಕೆ ಶ್ರೀ ವೆಂಕಟೇಶ್ವರಸ್ವಾಮಿ ಚಿರಶಾಂತಿಯನ್ನು ಕಲ್ಪಿಸಲಿ ಎಂದು ಪ್ರಾರ್ಥಿಸುತ್ತ, ಆ ಹಿರಿಯ ಜೀವನ ಉದಾತ್ತ ಆದರ್ಶಗಳು ನಮ್ಮ ಜೀವದವಲ್ಲೂ ಮಿಳಿತ ವಾಗಲಿ ಎಂದು ಬಯಸುವ. ಹಾಗಾದಲ್ಲಿ ಆಕೆ ನಮ್ಮೆಲ್ಲರ ಹೃದಯಗಳಲ್ಲಿ ಸದಾ ನೆಲೆಸುವಂತಾಗುತ್ತದೆ.

ನೈನಂ ಛಿಂದಂತಿ ಶಸ್ತ್ರಾಣಿ
ನೈಸಂ ದಹತಿ ಪಾವಕಃ
ನ ಚೈನಂ ಕ್ಲೇದಯಂತ್ಯಾಪೋ
ನ ಶೋಷಯತಿ ಮಾರುತಃ

# ವೀರಶೈವಮತ - ಕರ್ನಾಟಕ

ಡಾ॥ ಎನ್. ಅನಂತರಂಗಾಚಾರ್

ಶೈವ ಮತದ ಅಧಿದೇವತೆಯೆಂದು ಹೆಸರಾದ ಶಿವನ ಪೂಜೆ ವೇದಕಾಲದಿಂದಲೂ ಬೆಳೆದು ಬಂದಿದೆ. ಈ ಶಿವಪೂಜೆಯು ಕರ್ನಾಟಕದ ಮೂಲ ನಿವಾಸಿಗಳಾದ ದ್ರಾವಿಡರ ದೇವತೆಯಾಗಿದ್ದಿರಬೇಕೆಂದೂ, ಅದನ್ನು ಆನಂತರ ಬಂದ ಆರ್ಯರು ಇತರ ಅನೇಕ ದ್ರಾವಿಡಸಂಸ್ಕೃತಿಯನ್ನು ಅನುಸರಿಸಿದಂತೆ ಇದನ್ನೂ ಅನುಕರಿಸಿರಬೇಕೆಂದೂ, ಹರಪ್ಪ ಮಹಂಜದಾರೋ ಸಂಶೋಧನೆಯಲ್ಲಿ ಕಂಡು ಬಂದ ಕೆಲವು ಅವಶೇಷಗಳು ಶಿವಪೂಜೆಯ ಸ್ಮಾರಕಗಳೆಂದೂ, ಕೆಲವು ಪಂಡಿತರ ಅಭಿಪ್ರಾಯ. ಆದರೆ ಹರಪ್ಪ ಮಹಂಜದಾರೋ ಸಂಸ್ಕೃತಿಯ ವಿಷಯ 'ಇದಮಿತ್ಥಂ' ಎಂದು ಇನ್ನೂ ನಿಷ್ಕರ್ಷೆಯಿಲ್ಲವಾಗಿ ಈ ಅಭಿಪ್ರಾಯಕ್ಕೆ ಈಗ ಹೆಚ್ಚು ಪುರಸ್ಕಾರ ಕೊಡಲಾಗುವುದಿಲ್ಲ. ಆದುದರಿಂದ ಶಿವ ಪೂಜೆಯ ಮೂಲವನ್ನು ವೇದಗಳಿಂದಲೇ ಗುರುತಿಸಬಹುದು. ವೇದದಲ್ಲಿ ಶಿವನಿಗೆ ರುದ್ರನೆಂಬ ಹೆಸರಿದೆ. ಇವನು ಋತ್ವಿಜರ ದೇವತೆಯಲ್ಲ. ಕೀಳುಮಟ್ಟದ ಕಳ್ಳರು, ಬೇಟೆಗಾರರು, ಸೈನಿಕರು – ಮೊದಲಾದವರ ಆರಾಧ್ಯ ದೇವತೆಯಾಗಿ ಜನಸಾಂದ್ರತೆಯಲ್ಲಿದೆ. ಕಾಡುಮೇಡುಗಳಲ್ಲಿಯೂ ಬೆಟ್ಟಗುಡ್ಡಗಳಲ್ಲಿಯೂ ವಾಸಿಸುತ್ತಿರುವ ದೇವತೆಯೆಂಬ ಕಲ್ಪನೆಯಿತ್ತು. ಕಾಲಾನುಕಾಲದಲ್ಲಿ ಈ ಭಾವನೆ ತಪ್ಪಿ ಶಿವನು ಮಂಗಳಕಾರಕ, ಕೈಲಾಸಪತಿ, ತ್ರಿಲೋಚನ, ಬಾಲೇಂದುಧರ, ಗಂಗಾಧರ, ಸತ್ಯಪರಿಪೂರ್ಣ, ಸರ್ವಾಂತರ್ಯಾಮಿ, ನಿಷ್ಕಲ ನಿರಂಜನ, ಪರಬ್ರಹ್ಮ ಎಂಬ ಭಾವನೆಗಳು ಬಂದು ಅವನ ನಿರಾಕಾರ ಪೂಜೆಯ ಪ್ರತೀಕವಾಗಿ ಲಿಂಗ ಪೂಜೆಯು ಪ್ರಾರಂಭವಾಗಿರಬೇಕು. ಆದರೆ ಇದು ಯಾವಾಗ ಬಳಕೆಗೆ ಬಂದಿತು ಎಂಬುದನ್ನು ಹೇಳಲಾಗುವುದಿಲ್ಲ. ಆದರೂ ಶಾತವಾಹನರ ಕಾಲದಿಂದ ಕರ್ನಾಟಕದಲ್ಲಿ ಶೈವ ಮತ ಪ್ರಚಾರದಲ್ಲಿತ್ತೆಂದು ಹೇಳಲು ಸಾಕಷ್ಟು ಆಧಾರಗಳಿವೆ. ಶಾತವಾಹನ ಮತ್ತು ಚುಟುಕುಲದ ರಾಜರು ತಾಳಗುಂದದ ಪ್ರಣವೇಶ್ವರನ ಪೂಜಕರಾಗಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ಅನಂತರದ ಕದಂಬರು ತಮ್ಮ ಮತ ಶಿವನಿಂದ ಉತ್ಪನ್ನವಾಯಿತೆಂದೂ ಮುಕ್ಕಣ್ಣ ಅಥವಾ ತ್ರಿನೇತ್ರ ವಂಶದ ಮೂಲಪುರುಷನೆಂದೂ ಹೇಳಿ ಕೊಂಡಿದ್ದಾರೆ. ಕದಂಬ ಮತ್ತು ಚಾಳುಕ್ಯವಂಶದ ಅನೇಕ ರಾಜರು ಈ ಮತಾನುಯಾಯಿಗಳಾಗಿದ್ದರು.

ಮುಂದೆ ಈ ಶೈವರಲ್ಲಿ ಪಾಶುಪತ, ಕಾಳಾಮುಖ, ಮಹೇಶ್ವರರೆಂಬ ಅನೇಕ ಪ್ರಭೇದಗಳು ಹುಟ್ಟಿದವು. ಕರ್ನಾಟಕದಲ್ಲಿ ಸ್ವಚ್ಛವೂ ಸಾತ್ತ್ವಿಕವೂ ಆದ ಪಾಶುಪತಮತವೂ ಭೈರವಾಚರಣೆಗಳಿಂದ ಕೂಡಿದ ಕಾಪಾಲಿಕಾದಿ ಮತಗಳೂ ಪ್ರಚಾರದಲ್ಲಿದ್ದುದಕ್ಕೆ ಶಾಸನಾಧಾರಗಳಿವೆ. ಶಂಕರಾಚಾರ್ಯರ ಕಾಲದಲ್ಲಿ ರೂಢಿಯಲ್ಲಿದ್ದ ಶೈವಮತದ ವಾಮಾಚಾರಗಳನ್ನು ಶಂಕರರು ಪರಿಷ್ಕರಿಸಿರುವಂತೆ ತಿಳಿದು ಬರುತ್ತದೆ.

ಪಾಶುಪತ, ಕಾಳಾಮುಖ, ಲಾಕುಳ ಮತ್ತು ಮಹೇಶ್ವರ ಪಂಥಗಳು ತಮ್ಮ ತತ್ತ್ವಗಳಲ್ಲಿ ಹೆಚ್ಚು ಕಡಿಮೆ ಏಕರೂಪವೆಂದು ಹೇಳಬಹುದು, ಶಂಕರಾಚಾರ್ಯರೂ, 'ಸರ್ವದರ್ಶನಸಂಗ್ರಹ'ಕಾರರಾದ ಮಾಧವರೂ ಇವೆಲ್ಲವನ್ನೂ ಮಹೇಶ್ವರರೆಂದೇ ಪರಿಗಣಿಸಿದ್ದಾರೆ. ಲಕುಲೀಶ, ನಕುಲೀಶ, ಲಾಕುಳ ಮುಂತಾದುವೂ ಅಲ್ಲಲ್ಲೇ ಉಲ್ಲೇಖವಾಗಿವೆ. ಕಾಳಾಮುಖ, ಪಾಶುಪತರ ಉಲ್ಲೇಖವೂ ಕರ್ನಾಟಕದ ಶಾಸನಗಳಲ್ಲಿ ದೊರೆಯುತ್ತವೆ. ಗಾಣಾಪತ್ಯ, ಸ್ಕಾಂದಮತಗಳು ಇವುಗಳಿಗೆ ಸಂಬಂಧಿಯಾದುವು. ಕರ್ನಾಟಕದಲ್ಲಿ ಕಾಳಾಮುಖಾಚಾರ್ಯರು ಪ್ರತಿಭಾಶಾಲಿಗಳೂ ಘನಪಂಡಿತರೂ ಮಹಾತಪಸ್ವಿಗಳೂ ಆಗಿದ್ದು ರಾಜಪೂಜಿತರೂ ಲೋಕಪೂಜಿತರಾಗಿದ್ದರು. ಅವರ ಕಾಲನ್ನು ಕರ್ಚಿ ರಾಜರೂ ಮಹಾರಾಜರೂ ಅವರಿಗೆ ದತ್ತಿಯನ್ನು ಬಿಟ್ಟಿರುವುದು ಶಾಸನಗಳಲ್ಲಿ ಉಕ್ತವಾಗಿದೆ. ಸುಮಾರು ಕ್ರಿ. ಶ. 6 ರಿಂದ 8 ನೆಯ ಶತಮಾನ ಕಾಲದಲ್ಲಿ ತಮಿಳುನಾಡಿನ ಮಾಣಿಕ್ಯವಾಚಕರ್, ಅಪ್ಪರ್, ಸಂಬಂಧರ್ ಸುಂದರರ್ ಎಂಬ ನಾಯನಾರುಗಳಿಂದ ಶುದ್ಧ ಶೈವ ಮತವು ಪ್ರಚಾರಕ್ಕೆ ಬಂದಿತು. ಅವರ ಕೃತಿಗಳು 'ತಿರುಮುರೈ', ಎಂಬ ಹೆಸರಿನಲ್ಲಿ ಸಂಗ್ರಹಿತವಾಗಿವೆ. ತತ್ತ್ವವನ್ನು ಜನರಾಡುವ ಭಾಷೆಯಲ್ಲಿ ಕ್ರೋಢೀಕರಿಸಿ ಅಪಾರವಾದ ಗ್ರಂಥರಾಶಿಯನ್ನು ತಮಿಳುನಾಡಿನಲ್ಲಿ ಸೃಷ್ಟಿಸಿದರು ಏಳುಜನ ಸಂತಾನಾಚಾರ್ಯರು. ಶೆಕ್ಕಿಳಾರ್, ಎಂಬುವರು 63 ಪುರಾತನರ ಜೀವನ ಚರಿತ್ರೆಯನ್ನು "ಪೆರಿಯಪುರಾಣಂ" ಎಂಬ ಗ್ರಂಥದಲ್ಲಿ ಸಂಗ್ರಹಿಸಿ ರಚಿಸಿದರು. ಸುಮಾರು ಇದೇ ಕಾಲದಲ್ಲಿ ಉತ್ತರ ದೇಶದಲ್ಲಿ ಭಿನ್ನ ಭಿನ್ನವಾದ ನಾನಾ ಶೈವಮತಗಳು ಪ್ರಚಾರಕ್ಕೆ ಬಂದವು. ಅವುಗಳಲ್ಲಿ 'ಪ್ರತ್ಯಭಿಜ್ಞಾದರ್ಶನ'ವೆಂಬ ಪ್ರಖ್ಯಾತವಾಗಿರುವ ಕಾಶ್ಮೀರ ಶೈವವು ಪ್ರಚಾರವಾಗಿ ಆ ಸಂಬಂಧವಾಗಿ ಒಂದು ದೊಡ್ಡ ಗ್ರಂಥರಾಶಿಯು ನಿರ್ಮಾಣವಾಯಿತು. ದಕ್ಷಿಣದಲ್ಲಿಯೇ ಶ್ರೀಕಂಠರ 'ಶೈವಾದ್ವೈತ' ಪಂಥವು ಪ್ರಚಾರದಲ್ಲಿತ್ತು. ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆಂದು ಹೆಸರು. ಸುಮಾರು 12 ನೆಯ ಶತಮಾನದ ಕರ್ನಾಟಕದಲ್ಲಿ ಈ ಎಲ್ಲವುಗಳ ಪ್ರಭಾದಿಂದ ವಿವಿಧ ರೀತಿಯ ಶೈವ ಪಂಥಗಳು ಪರಸ್ಪರ ಪ್ರತಿದ್ವಂದ್ವಿಗಳಾಗಿ ಕೆಲಸಮಾಡುತ್ತಿದ್ದವು. ಇವುಗಳೆನ್ನೆಲ್ಲಾ ಸಮನ್ವಯಮಾಡಿ ಕನ್ನಡಿಗರಲ್ಲಿ ಐಕಮತ್ಯವನ್ನು ಸಾಧಿಸಲು ಕರ್ನಾಟಕದಲ್ಲಿ ವೀರಶೈವ ಮತವು ಸ್ಥಾಪಿತವಾಯಿತು.

ವೀರಶೈವಸಿದ್ಧಾಂತವು ಈಶ್ವರನ ಪಂಚವಕ್ತ್ರಗಳಾದ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ – ಎಂಬ ಐದು ಮುಖಗಳಿಂದ ಉದ್ಭವವಾದವರೆಂದು ಪ್ರತೀತಿಯುಳ್ಳ ರೇಣುಕ, ದಾರುಕ, ಘಂಟಾಕರ್ಣ, ಧೇನುಕರ್ಣ ಮತ್ತು ವಿಶ್ವಕರ್ಣರಿಂದ ಪ್ರಾರಂಭವಾಗುತ್ತದೆ. ಇವರೇ ಕಲಿಯುಗದಲ್ಲಿ ರೇವಣಸಿದ್ಧ, ಮರುಳುಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವೇಶ್ವರರೆಂಬ ರೂಪದಲ್ಲಿ ಅವತರಿಸಿ ಸಿದ್ಧಾಂತ ಪ್ರಚಾರ ಮಾಡಿದರೆಂದು ಸಂಪ್ರದಾಯಾಭಿಪ್ರಾಯ. ಇವರುಗಳಿಗೆ ಪಂಚಾಚಾರ್ಯರೆಂದು ಸಂಜ್ಞೆ. ಇವರ ಅವತಾರ ವಿಷಯವು 'ಸ್ವಾಯಂಭುವಾಗಮ'ದಲ್ಲಿ ಉಕ್ತವಾಗಿದೆ. ಇವರು ಭರತಖಂಡದ ಐದು ಪ್ರಸಿದ್ಧಕ್ಷೇತ್ರಗಳಾದ ಕೇದಾರ, ಶ್ರೀಶೈಲ, ಉಜ್ಜಯಿನಿ, ರಂಭಾಪುರಿ ಮತ್ತು ಕಾಶಿಯಲ್ಲಿ ಮಠಗಳನ್ನು ಸ್ಥಾಪಿಸಿ ಸಿದ್ಧಾಂತ ಪ್ರಚಾರ ಮಾಡಿದರೆಂದು ಪ್ರತೀತಿ. ಈ ಆಚಾರ್ಯರಲ್ಲಿ ಮೊದಲ ಮೂವರು ಆಚಾರ್ಯರ ಹೆಸರು ಬಸವಪುರಾಣದ ಪ್ರಾರಂಭದಲ್ಲಿ ವೀರಶೈವಾಚಾರ್ಯರೆಂದು ಉಕ್ತವಾಗಿದೆ. ಅಬ್ಬಲೂರು ಶಾಸನದಿಂದ ಏಕಾಂತ ರಾಮಯ್ಯನೆಂಬುವನು ಬಿಜ್ಜಳನ ಎದುರಿಗೆ ಅದ್ಭುತವಾದ ದಿವ್ಯವನ್ನು ಪ್ರದರ್ಶಿಸಿದಂತೆ ನಿರೂಪಿತ

ವಾಗಿದೆ. ಈ ಅಭಿಪ್ರಾಯವು 'ಬಸವಪುರಾಣ' ದಲ್ಲಿಯೂ ಅನುವಾದಿತವಾಗಿದೆ.

ಈಗ ವೀರಶೈವಪಂಥದಲ್ಲಿ ಪ್ರಸಿದ್ಧರಾದ ಹೆಸರು ಬಸವೇಶ್ವರರದು. ಅವರು ಈ ಸಿದ್ಧಾಂತದ ಸ್ಥಾಪಕರಲ್ಲದಿದ್ದರೂ ಉದ್ದಾಮ ಪ್ರಚಾರಕರೆಂಬುದರಲ್ಲಿ ಸಂದೇಹವಿಲ್ಲ. ಅವರು ಬಾಗೇವಾಡಿಯಲ್ಲಿ ಜನಿಸಿ ಕಪ್ಪಡಿಸಂಗಮೇಶ್ವರನ ಭಕ್ತರಾಗಿ ವೀರಶೈವಮತ ಪ್ರಚಾರಮಾಡಿದರು. ಆ ಕಾಲದಲ್ಲಿ ಇವರಿಗೆ ಅಲ್ಲಮಪ್ರಭು, ಚೆನ್ನಬಸವ, ಮಹಾದೇವಿಯಕ್ಕ ಮೊದಲಾದವರು ವಿಶೇಷ ಸಹಾಯಮಾಡಿದರು. ಇವರ ಅಮೋಘ ಪ್ರಯತ್ನದಿಂದ ಕನ್ನಡ ಭಾಷೆಯಲ್ಲಿ ವಚನಶಾಸ್ತ್ರವೆಂಬ ದೊಡ್ಡ ಗ್ರಂಥರಾಶಿಯೇ ನಿರ್ಮಾಣವಾಯಿತು. ಲಿಂಗಧಾರಣೆ ವೀರಶೈವರ ಅಸಾಧಾರಣಲಕ್ಷಣವಾದುದರಿಂದ ಇವರಿಗೆ ಲಿಂಗಾಯಿತರೆಂಬ ಹೆಸರು ಪ್ರಸಿದ್ಧಿಯಾಗಿದೆ.

ವೀರಶೈವ ಸಿದ್ಧಾಂತವು ಶೈವಾಗಮಗಳ ಆಧಾರದ ಮೇಲೆ ಬೆಳೆದಿದೆ. ಆಗಮಗಳು ವೇದಸಾರವನ್ನೇ ಪ್ರಚಾರಮಾಡುತ್ತವೆಂದು ನಂಬಿಕೆ. ಈ ಪಂಥಕ್ಕೆ 63 ಜನ ಪುರಾತನ ಶೈವಭಕ್ತರೂ ಅವರ ಉಕ್ತಿಗಳೂ ಪೂಜ್ಯವಾದುವು. ಅರ್ವಾಚೀನ ಶೈವಭಕ್ತರಿಗೆ ನೂತನರೆಂದು ಹೆಸರು. ಇವರು 760 ಮಂದಿ ಎಂದು ಹೇಳಲ್ಪಟ್ಟಿದೆ. ವೀರಶೈವರಿಗೆ ನೂತನ ಪುರಾತನರ ವಚನಗಳು, ಆಗಮಗಳೂ, ವೀರಶೈವ ಪುರಾಣಗಳು ಆಧಾರಗ್ರಂಥಗಳು. ಪ್ರತ್ಯಕ್ಷ ಮತ್ತು ಅನುಮಾನವೆಂಬ ಎರಡು ಪ್ರಮಾಣಗಳು ಅಂಗೀಕೃತವಾಗಿವೆ.

ವೀರಶೈವ ಸಿದ್ಧಾಂತಕ್ಕೆ ಶಕ್ತಿ ವಿಶಿಷ್ಟಾದ್ವೈತವೆಂದು ಹೆಸರು. ಆತ್ಮ ಬ್ರಹ್ಮಗಳಲ್ಲಿ ದ್ವೈತಭಾವನೆಯಿಲ್ಲ. ಎರಡೂ ಅವಿಭಾಜ್ಯವಾದ ಶಕ್ತಿಯಿಂದ ವಿಶಿಷ್ಟವಾಗಿವೆ. ಪ್ರತ್ಯೇಕವಾದ ಆತ್ಮವು ಪೂರ್ಣವಾದ ಬ್ರಹ್ಮದ ಐಕ್ಯವೂ ಅಲ್ಲ, ಪೂರ್ಣವಾಗಿ ಭಿನ್ನವೂ ಅಲ್ಲ. ಬ್ರಹ್ಮಪೂರ್ಣ, ಆತ್ಮ ಅದರ ಒಂದುಭಾಗ. ಪರಶಿವನೇ ಸಚ್ಚಿದಾನಂದ ಸ್ವರೂಪನೂ ಅದ್ವಿತೀಯನೂ ತೇಜೋವಂತನೂ ಆದ ಪರಬ್ರಹ್ಮ. ಆತನು ವಿಶ್ವಾಕಾರ. ಸಕಲ ಸಕಲ ಸದ್ಗುಣ ಪರಿಪೂರ್ಣ. ಚೇತನಾತ್ಮಕವಾದ ಪ್ರಪಂಚವು ಅವನ ಇಚ್ಛಾಶಕ್ತಿಯಿಂದ ಪರಿಣಾಮಗೊಂಡು ವಿಕಾಸವಾದರೂ ಅವನು ಅದರಿಂದ ಸ್ವಲ್ಪವೂ ಪ್ರಭಾವಿತವಾಗುವುದಿಲ್ಲ. ಅವನೇ ಪರಮ ಕಾರಣನಾಗಿದ್ದರೂ ಆತನಿಗೆ ಸಂಕೋಚ ವಿಕಾಸಗಳಿಲ್ಲ.

ಶಕ್ತಿಯು ಪರಶಿವನಲ್ಲಿ ನಿತ್ಯವಾಗಿ ನೆಲೆಸಿರುವ ಅವಿಭಾಜ್ಯಗುಣ-ಅದೇ ಮೂಲ ಪ್ರಕೃತಿ ಅಥವಾ ಮಾಯೆ ಎನಿಸಿಕೊಳ್ಳುತ್ತದೆ. ಅದೇ ಪ್ರಪಂಚವಾಗಿ ಪರಿಣಾಮಗೊಳ್ಳುವುದು. ಈ ಮಾಯೆಯು ಅದ್ವೈತದ ಮಾಯೆಯಲ್ಲ. "ಸಿದ್ಧಾಂತಾಗಮ" ದಲ್ಲಿ ಅದು ಪರಬ್ರಹ್ಮನಲ್ಲಿ ಸರ್ವದಾ ವಾಸಮಾಡುವ ವಸ್ತುವೆಂದು ಉಕ್ತವಾಗಿದೆ. ಅಗ್ನಿಗೆ ಶಾಖ

ದಂತೆ, ಶಿವನಿಗೆ ಶಕ್ತಿ. ಶಕ್ತಿ ಮೂಲಕವಾಗಿಯೇ ಶಿವನು ಜಗತ್ಕಾರಣನಾಗುವನು. ಪ್ರಪಂಚದ ಎಲ್ಲ ವಸ್ತುಗಳೂ ಮಾಯೆಯಿಂದಲೇ ಉತ್ಪನ್ನವಾಗುವುದು. ಇದಕ್ಕೆ ಸೃಷ್ಟಿಯೆಂದು ಹೆಸರು. ಪ್ರಳಯಕಾಲದಲ್ಲಿ ಎಲ್ಲವೂ ಮಾಯೆಯಲ್ಲಿ ಬೀಜ ರೂಪದಲ್ಲಿ ಬಂದು ನೆಲೆಸುವುವು.

ಜೀವನು ಶಿವನ ಒಂದು ಅಂಶ. ಅವಿದ್ಯೆಯಿಂದ ತಾನು ಭಿನ್ನನೆಂದು ತಿಳಿಯುತ್ತಾನೆ. ಜೀವನು ಶಿವನಿಂದಲೇ ಹೊರಟು ಅವನ ಸಾರವತ್ತಾದ ಭಾಗವನ್ನು ಹೊಂದಿ, ಕೊನೆಗೆ ಅವನಲ್ಲಿಯೇ ಐಕ್ಯವಾಗುವುದರಿಂದ ಅವನು ಶಿವನಿಂದ ಅಭಿನ್ನವೆಂದು ಹೇಳಬೇಕು. ಅವಿದ್ಯಾ ನಿವೃತ್ತಿಯಾದ ಮೇಲೆ ಅದಕ್ಕೆ ಪ್ರತ್ಯೇಕ ಸ್ಥಿತಿಯಿಲ್ಲದುದರಿಂದ ಅವನಲ್ಲಿಯೇ ಬಂದು ಸೇರುವುದು. ಅವನ ಭಾಗವೇ ಆಗಿದ್ದರೂ ವಿಶ್ವಾಕಾರವೂ ವಿಶ್ವಾಧಿಕ್ಯವೂ ಇಲ್ಲದುದರಿಂದ ಅವನಿಂದ ಭಿನ್ನವಾದುದು. ಅದರ ಜ್ಞಾನ ಕ್ರಿಯಾಶಕ್ತಿ ಸೀಮಿತವಾದುದು. ಅದು ಮಾಯಾ ಕರ್ಮಾದಿಮಲಗಳಿಂದ ಸಂಸಾರಕ್ಕೆ ಭಾಗಿಯಾಗಿರುತ್ತದೆ. ಆ ದೃಷ್ಟಿಯಿಂದ ವೀರಶೈವವು ಭೇದಾಭೇದಪಂಥಕ್ಕೆ ಸೇರುತ್ತದೆ. ಅಂತ್ಯಧ್ಯೇಯ ಪರಶಿವನಲ್ಲಿ ಐಕ್ಯನಾಗುವುದೇ. ಐಕ್ಯಸ್ಥಿತಿಯಲ್ಲಿ ಜೀವನು ಉಪಮಾತೀತವಾದ ಆನಂದವನ್ನು ಅನುಭವಿಸುತ್ತಾನೆ. ಈ ಅಂತ್ಯಾವಸ್ಥೆಗೆ ಲಿಂಗಾಂಗ ಸಾಮರಸ್ಯವೆಂದು ಹೆಸರು.

ಪರತತ್ತ್ವವಾದ ಶಿವನಿಗೆ ವೀರಶೈವದಲ್ಲಿ ಸ್ಥಲವೆಂದು ಹೆಸರು. ಸ್ಥಲವೆಂದರೆ ಪ್ರದೇಶ, ಶಿವನೇ ಎಲ್ಲ ಜೀವಿಗಳ ಆವಾಸಸ್ಥಳ; ಆಶ್ರಯ. ಅವನಲ್ಲಿ ಎಲ್ಲವೂ ನೆಲೆಸಿವೆ. ಅಲ್ಲಿಗೇ ಕೊನೆಯಲ್ಲಿ ಎಲ್ಲವೂ ಹೋಗಿ ಸೇರುವುವು. ಅಲ್ಲಿಯೇ ಲಯವಾಗುತ್ತವೆ. ಅವನ ಇಚ್ಛೆಯಿಂದಲೇ ಈ ಸ್ಥಲವು ತನ್ನ ಶಕ್ತಿ ಸ್ಫುರಣದಿಂದ ಲಿಂಗ ಅಂಗಗಳಾಗಿ ಭಾಗವಾಗುತ್ತವೆ.

ಲಿಂಗವೇ ಶಿವ – ಪೂಜ್ಯವಸ್ತು. ಅಂಗ ಅದರ ಭಾಗ. ಜೀವ ಪೂಜಕ. ಶಕ್ತಿಯು ಕಲಾ ಮತ್ತು ಭಕ್ತಿಯಾಗಿ ವಿಭಾಗವಾಗಿ ಕಲೆಯು ಶಿವನಲ್ಲಿಯೂ ಭಕ್ತಿಯು ಅಂಗದಲ್ಲಿಯೂ ಬಂದು ಸೇರುವುವು. ಶಿವನಿಂದ ಪ್ರಪಂಚವು ಪರಿಣಾಮವಾಗುವುದಕ್ಕೆ ಕಲೆಯೇ ಕಾರಣ. ಭಕ್ತಿಯು ಸಂಸಾರದಿಂದ ಅಂತ್ಯಮೋಕ್ಷದ ಕಡೆಗೆ ಜೀವನವನ್ನು ಸೆಳೆಯುವುವು. ಈ ಕಾರ್ಯವು ಲಿಂಗಾಂಗಗಳಲ್ಲಿ ಭಕ್ತ, ಮಹೇಶ್ವರ, ಪ್ರಸಾದ, ಪ್ರಾಣಲಿಂಗ, ಶರಣ, ಐಕ್ಯ, ಎಂಬ ಆರು ಮೆಟ್ಟಲುಗಳಲ್ಲಿ ಸಾಧ್ಯವಾಗುವುದು. ಇದಕ್ಕಾಗಿಯೇ ಇದಕ್ಕೆ 'ಷಟ್ಸ್ಥಲಸಿದ್ಧಾಂತ'ವೆಂದು ಹೆಸರು ಬಂದಿರುವುದು. ಈ ಸಾಧನೆಗೆ ಅಷ್ಟಾವರಣಗಳಾದ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಪಾದೋದಕ, ಪ್ರಸಾದ ಮತ್ತು ಪಂಚಾಕ್ಷರಗಳು ಸಹಾಯಕಗಳು. ಇವುಗಳ ಪ್ರತಿಪಾದನೆ ಕನ್ನಡದಲ್ಲಿರುವ ಶೂನ್ಯ ಸಂಪಾದನೆಗಳಲ್ಲಿ ವಿಶದವಾಗಿದೆ.

ವೀರಶೈವ ಮತವೂ ಅದರ ವಚನ ಸಾಹಿತ್ಯವೂ ಕರ್ನಾಟಕದಮೇಲೆ ವಿಶೇಷ ಪ್ರಭಾವವನ್ನು ಬೀರಿವೆ. ಶರಣರ ವಚನಗಳಿಂದಲೂ ಅವರ ಉಪದೇಶಗಳಿಂದಲೂ ಅನೇಕರು ಲಿಂಗವಂತರಾಗಿ ಅದರ ದೀಕ್ಷೆಯನ್ನು ವಹಿಸಿದರು. ಬಹು ಆಕರ್ಷಕವಾದ ಸರಳ ಭಾಷೆಯ ವಚನಗಳ ಮೂಲಕ ಸಾಮಾನ್ಯ ಜನರ ನೀತಿ ನಡತೆಗಳನ್ನು ತಿದ್ದಿ ಚೊಕ್ಕವನ್ನಾಗಿ ಮಾಡಿದರು. ಅದರ ಪ್ರಭಾವಕ್ಕೊಳಗಾದ ಅನೇಕ ರಾಜರುಗಳ ಪ್ರೋತ್ಸಾಹದಿಂದ ವೀರಶೈವ ಸಾಹಿತ್ಯವೂ ಯಥೇಚ್ಛವಾಗಿ ಬೆಳೆಯಿತು.

ಕಲ್ಯಾಣದಲ್ಲಿ ಕಲಚೂರ್ಯರಾಜನಾದ ಬಿಜ್ಜಳನ ಆಶ್ರಯದಲ್ಲಿ ಬಸವಣ್ಣನವರ ಅನುಭವ ಮಂಟಪದಲ್ಲಿ ಶಿವಶರಣರ ವಿಚಾರಮಂಥನದ ಫಲವಾಗಿ ಅಭಿವೃದ್ಧಿ ಗೊಂಡ ವೀರಶೈವ ಮತವು ಬಹುಬೇಗನೆ ಕರ್ನಾಟಕದಲ್ಲೂ ಹೊರಗೂ ಹರಡಲಾರಂಭಿಸಿತು. ಆಂಧ್ರದೇಶದ ಬಹುಭಾಗವನ್ನಾಳುತ್ತಿದ್ದ ಕಾಕತೀಯ ಪ್ರತಾಪರುದ್ರನೂ ಶೈವಪಕ್ಷಪಾತಿಯಾದನು. ಈತನ ದೀಕ್ಷಾಗುರು ವಿಶ್ವೇಶ್ವರ ಶಂಭುವೆಂದೂ, ಆ ವಿಶ್ವೇಶ್ವರನ ಸುತ್ತಮುತ್ತ ನೂರಾರು ವೀರಶೈವಾಚಾರ್ಯರಿರುತ್ತಿದ್ದರೆಂದೂ ಮಲಿಕಾಪುರದ ಶಿಲಾಶಾಸನದಿಂದ ಶ್ರುತಪಡುತ್ತದೆ. ವಿಜಯನಗರದ ರಾಜ್ಯಸ್ಥಾಪನೆಯಲ್ಲಿ ಸಂಗಮ ರಾಜರು ಶೈವಗುರುಗಳಾದ ಕ್ರಿಯಾಶಕ್ತಿ ಪಂಥದವರಿಂದ ವಿಶೇಷ ಸಹಾಯವನ್ನು ಪಡೆದಿರಬೇಕು. ಒಂದನೆಯ ಬುಕ್ಕನು ಮೊದಲ್ಗೊಂಡು ಇಮ್ಮಡಿ ಹರಿಹರನ ಕಾಲದವರೆಗೆ ಇವರ ಪ್ರಭಾವ ವಿಶೇಷವಾಗಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ. ಇವರೇ ಸಂಗಮ ರಾಜರ ಗುರುಗಳು. ಕಾಶೀವಿಲಾಸ ಕ್ರಿಯಾಶಕ್ತಿ ಬುಕ್ಕನ ಕುಲಗುರು, ಬನವಾಸಿಯಲ್ಲಿ ಮಂತ್ರಿಯಾಗಿದ್ದ ಮಾಧವಮಂತ್ರಿಯ ಗುರುವಾಗಿದ್ದವನೂ ಇವನೇ. ಮಾಧವ ಮಂತ್ರಿ ಮತ್ತು ಮಾದಪ್ಪನಿಂದ ರಚಿತವಾದ 'ಸರ್ವಾಗಮ ಸಾರಸಂಗ್ರಹ'ದ ರಚನೆಗೆ ಈತನೇ ಪ್ರೇರಕನಾಗಿರಬೇಕು. ಅಪರಾವತಾರನೆಂದೂ ತ್ರಿಯಂಬಕನನ್ನು ಕೀರ್ತಿವಂತನೆಂದೂ ಹೇಳಿದೆ, ಚೆನ್ನರಾಯಪಟ್ಟಣದ ೨೫೬ನೆಯ ಶಾಸನದಲ್ಲಿ. ಇಮ್ಮಡಿ ಹರಿಹರನು ಇವರನ್ನು 'ಶ್ರೀ ಮದ್ರಾಜಗುರು ಮಹಾಮಂಡಲಾಚಾರ್ಯ ವಾಣೀವಿಲಾಸಕ್ರಿಯಾಶಕ್ತಿ' ಎಂದು ಸಂಬೋಧಿಸಿದ್ದಾನೆ. ಗಂಗಾದೇವಿಯ 'ವೀರಕಂಪರಾಯ ಚರಿತೆ' ಯಲ್ಲಿ ಕ್ರಿಯಾಶಕ್ತಿಯೇ ಇಮ್ಮಡಿ ಕಂಪಣ್ಣನ ಕುಲಗುರುವೆಂದು ಹೇಳಿದೆ. ೧೩೮೦ನೆಯ ವರ್ಷದ ಶಾಸನವೊಂದರಲ್ಲಿ ಇಮ್ಮಡಿ ಬುಕ್ಕನು ಕ್ರಿಯಾಶಕ್ತಿ ದೇಶಿಕನ ಆಜ್ಞೆಯ ಪ್ರಕಾರ ಶೃಂಗೇರಿಯ ವಿದ್ಯಾಶಂಕರ ಸ್ವಾಮಿಗೆ ದತ್ತಿ ಬಿಟ್ಟಿರುವಂತೆ ಉಕ್ತವಾಗಿದೆ. ಈ ಕ್ರಿಯಾಶಕ್ತಿಗಳು ಲಕುಲಾಗಮಕ್ಕೆ ಸೇರಿದ ಪಾಶುಪತಾವಲಂಬಿಗಳು. ಇಮ್ಮಡಿ ಹರಿಹರನು ತನ್ನ ಕುಲಗುರುವಾದ ಕ್ರಿಯಾಶಕ್ತಿಯ ಆಜ್ಞೆಯ ಪ್ರಕಾರ ಗದಗು ಪ್ರಾಂತ್ಯವನ್ನು ೬೬ ಹಳ್ಳಿಗಳಾಗಿ ವಿಂಗಡಿಸಿ ವಿದ್ವಾಂಸರಿಗೆ ದಾನಮಾಡಿದನೆಂದು ಡಾಂಬಲ್ ತಾಮ್ರ ಶಾಸನದಿಂದ ಶ್ರುತಪಡುತ್ತದೆ. ಮಾಧವ ಮಂತ್ರಿಯೂ ಕೂಡ ಕ್ರಿಯಾಶಕ್ತಿ ದೇಶಿಕನ ಆಜ್ಞೆಯ ಪ್ರಕಾರ ಒಂದು ವರ್ಷ ತಪಸ್ಸು ಮಾಡಿ ವರ್ಷಾಂತ್ಯದಲ್ಲಿ ಬುಕ್ಕಮಹಾರಾಜನಿಂದ ಮುಚ್ಚುಂದಿ ಎಂಬ ಗ್ರಾಮವನ್ನು ಪಡೆದು ಅದನ್ನು ವೃತ್ತಿಗಳನ್ನಾಗಿ ವಿಭಾಗಿಸಿ ಎಂಬತ್ತು ಜನ ಕಾಶ್ಮೀರ ಶೈವರಿಗೆ ದಾನಮಾಡಿದನೆಂಬುದು ಶಿಕಾರಿಪುರದ ಶಾಸನದಿಂದ ವ್ಯಕ್ತಪಡುತ್ತದೆ. ಸಂಗಮರ ಕಾಲದಲ್ಲಿ ವೀರಶೈವ ಪಂಥವು ಚೆನ್ನಾಗಿ ಬೆಳೆಯಿತು. ಈ ಕಾಲದಲ್ಲಿ ಪ್ರಸಿದ್ಧನಾಗಿದ್ದವನು ಪಾಲ್ಕುರಿಕೆ ಸೋಮನಾಥ. ಇವನು ವೀರಪ್ರತಾಪ ಇಮ್ಮಡಿ ರುದ್ರನ ಆಸ್ಥಾನದಲ್ಲಿ 'ಸೋಮನಾಥ ಭಾಷ್ಯ', 'ರುದ್ರಭಾಷ್ಯ','ಅಷ್ಟಕ' 'ಬಸವೋದಾಹರಣೆ' – ಮೊದಲಾದುವುಗಳನ್ನು ರಚಿಸಿದನು. ಚೆನ್ನರಾರು ಕರಸ್ಥಳ ಸೋಮ, ಕರಸ್ಥಳವಿಶ್ವನಾಥ, ರೇಂತಾಲ ಮಲ್ಲಿನಾಥ, ಗೊಬ್ಬೂರುಸಂಗ, ಪಾಲ್ಕುರಿಕೆ ಸೂರಣ್ಣ, ಗುರುಲಿಂಗಾರ್ಯ, ಕಟ್ಟುವುರ್ತಿ ಪೊಟ್ಟದೇವ, ಇವರು ಸಮಕಾಲೀನ ವೀರಶೈವ ಗುರುಗಳು. ಗೋಳಾಕಿ ಮಠದ ಪಾಶುಪತಶೈವರು ಈ ಕಾಲದಲ್ಲಿ ಪ್ರಬಲರಾಗಿದ್ದರು. ಈಗಲೂ ಹುಲಿಮಠವು ಜ್ಞಾನಶಕ್ತಿ ಮತ್ತೂ ಸಾಂಬಶಕ್ತಿ ಎಂಬುವರ ಅಧ್ಯಕ್ಷತೆಯಲ್ಲಿ ಕಾಳಾಮುಖ ಶೈವರ ಕೇಂದ್ರವಾಗಿತ್ತು. ವಿಜಯನಗರದ ಪ್ರೌಢದೇವರಾಯನೂ ಅವನ ಅಧಿಕಾರಿಗಳೂ ಅನೇಕ ಕನ್ನಡ ವೀರಶೈವ ಗ್ರಂಥಕರ್ತರಿಗೆ ಪ್ರೋತ್ಸಾಹವನ್ನಿತ್ತರು. ಇವರ ಆಶ್ರಯದಲ್ಲಿದ್ದವರಲ್ಲಿ 'ಏಕೋತ್ತರ ಶತಸ್ಥಲ', ಷಟ್ಸ್ಥಲವಿವೇಕ', ಗಳ ಕರ್ತೃವೂ ವೀರಶೈವ ಗಣಾಚಾರ್ಯನೂ ಆದ ಮಹಾಲಿಂಗದೇವನು ಮುಖ್ಯನಾದವನು. ಇವನು ತನ್ನ ಶಿಷ್ಯನಾದ ಪ್ರೌಢದೇವರಾಯನ ದಂಡನಾಥನಾದ ಜಕ್ಕಣ್ಣನ ಉಪದೇಶಾರ್ಥವಾಗಿ ಇವುಗಳನ್ನು ರಚಿಸಿದಂತೆ ಹೇಳಿಕೊಂಡಿದ್ದಾನೆ. 'ಶಿವತತ್ತ್ವ ಚಿಂತಾಮಣಿ'ಯ ಕರ್ತೃವಾದ ಲಕ್ಕಣ್ಣ ದಂಡೇಶನು ಪ್ರೌಢದೇವರಾಯನ ಆಸ್ಥಾನದಲ್ಲಿದ್ದ ಮತ್ತೊಬ್ಬ ಕವಿ. ಜಕ್ಕಣ್ಣದಂಡನಾಥನೂ ಅವನ ಗುರುವಾದ ಕುಮಾರ ಬಂಕನಾಥನೂ ಅನೇಕ

ಗ್ರಂಥಗಳನ್ನು ಸ್ವತಃ ರಚಿಸಿದುದಲ್ಲದೆ ಅನೇಕ ಕವಿಗಳಿಗೆ ಪೋಷಕರಾಗಿದ್ದರು. "ಲಿಂಗಲೀಲಾ ವಿಲಾಸ ಚಾರಿತ್ರ"ವನ್ನು ಬರೆದ ಕಲ್ಲುಮಠದ ಪ್ರಭುದೇವನೂ ಜಕ್ಕಣಾರ್ಯನ 'ಏಕೋತ್ತರ ಶತಸ್ಥಲ'ಕ್ಕೆ ಟೀಕೆಯನ್ನು ಬರೆದ ಗೀರೀಂದ್ರನು 'ಕರಸ್ಥಲ ನಾಗಲಿಂಗ ತ್ರಿಪದಿ' ಯನ್ನು ಬರೆದ ನಾಗದೇವನೂ 'ಶಿವಯೋಗಾಂಗ ಭೂಷಣ'ದ ಕರ್ತೃವಾದ ಗುರುಬಸವನೂ ಅನುಭವಸೂತ್ರ ಕಾರನಾದ ಮೊಗ್ಗೆಯ ಮಾಯಿದೇವನೂ ದೇವ ರಾಯನ ಕಾಲದಲ್ಲಿ ಗ್ರಂಥರಚನೆಮಾಡಿ ಕನ್ನಡ ಸಾಹಿತ್ಯವನ್ನು ಸಮೃದ್ಧವನ್ನಾಗಿ ಮಾಡಿದ್ದಾರೆ. ಮಲ್ಲಿಕಾರ್ಜುನ ವಿರೂಪಾಕ್ಷರ ಕಾಲದಲ್ಲಿಯೂ ಅನೇಕ ಜನ ವೀರಶೈವ ಗ್ರಂಥಕರ್ತರು ಆಶ್ರಯ ಪಡೆದಿದ್ದರು. ಬೊಮ್ಮರಸನು ಹಿಂದೆ ಹರೀಶ್ವರ, ಸೋಮನಾಥ ಮೊದಲಾದವರು ವಿಸ್ತರಿಸಿದ ನಂಬ್ಯಣಾಂಕನ ಪುಣ್ಯಚರಿತ್ರೆಯನ್ನು 'ಸೌಂದರ ಪುರಾಣ'ವೆಂಬ ಹೆಸರಿನಿಂದ ಬರೆದನು. ಕಲ್ಲರಸರು 'ಜನವಶ್ಯ'ವೆಂಬ ಕಾಮಶಾಸ್ತ್ರವನ್ನು ರಚಿಸಿದನು. ಇದಕ್ಕೆ ಮಲ್ಲಿಕಾರ್ಜುನ ವಿಜಯವೆಂಬ ಹೆಸರೂ ಉಂಟು. ಹರಪನಹಳ್ಳಿ ಮಠದ ಗೋಸಲ ಬಸವೇಶ್ವರನ ಶಿಷ್ಯನಾದ ತೋಂಟದ ಸಿದ್ಧಲಿಂಗನು ಆಕಾಲದ ಮತ್ತೊಬ್ಬ ಪ್ರಸಿದ್ಧ ವೀರಶೈವಕವಿ. ಈತನು 'ಷಟ್ಸ್ಥಲ ಜ್ಞಾನ ಸಾರಾಮೃತ' ಎಂಬ ವೀರಶೈವ ಗ್ರಂಥವನ್ನು ರಚಿಸಿದ್ದಾನೆ. ಇವನ ಪ್ರೋತ್ಸಾಹದಿಂದ ಇತರರೂ ಅನೇಕ ಮತಗ್ರಂಥಗಳನ್ನು ರಚಿಸಿದ್ದಾರೆ. 'ಚೆನ್ನಬಸವಪುರಾಣ'ದಲ್ಲಿಯೂ, 'ಸಿದ್ಧೇಶ್ವರ ಪುರಾಣ'ದಲ್ಲಿಯೂ ತೋಂಟದ ಸಿದ್ಧಲಿಂಗನು ವೀರಶೈವ ಗಣಾಚಾರ್ಯನೆಂದೂ, ಗುಬ್ಬಿಯ ಮಲ್ಲಣ್ಣ, ಸಿದ್ಧಲಿಂಗೇಶ್ವರ, ದೊಡ್ಡಲಿಂಗೇಶ್ವರ, ಗುಮ್ಮಳಾಪುರದ ಸಿದ್ಧಲಿಂಗೇಶ್ವರ, ಮೊದಲಾದವರ ಗುರುವೆಂದೂ ಹೇಳಿದೆ. ಇವರಲ್ಲಿ ಗುಬ್ಬಿಯ ಮಲ್ಲಣ್ಣನು 'ಭಾವ ಚಿಂತಾರತ್ನ'ವನ್ನು ರಚಿಸಿದ ಕವಿ ಮಲ್ಲಣಾರ್ಯನ ಪಿತಾಮಹ, ಈತನು 'ಗಣಭಾಷ್ಯರತ್ನಮಾಲೆ', 'ವಾತೂಲ ತಂತ್ರಟೀಕೆ'ಎಂಬೆರಡು ಗ್ರಂಥಗಳನ್ನು ರಚಿಸಿದ್ದಾನೆ. ಸಿದ್ದಲಿಂಗೇಶ್ವರನು 'ಸ್ವತಂತ್ರ ಸಿದ್ಧಲಿಂಗೇಶ್ವರ ವಚನ', 'ಮುಕ್ತ್ಯಂಗನಾಕಂದ ಮಾಲೆ'–ಇವುಗಳ ಕರ್ತೃವಿರಬಹುದು. ಗುಮ್ಮಳಾಪುರದ ಸಿದ್ಧಲಿಂಗನು 'ಷಟ್ಸ್ಥಲದ ಲಿಂಗಾಂಗ ಬಂಧ'ದ ನಿರ್ವಚನವನ್ನು ಬರೆದವನು. ಗುಬ್ಬಿಯ ಮಲ್ಲಣಾರ್ಯನ ಶಿಷ್ಯನಾದ ಮಲ್ಲಿಕಾರ್ಜುನ ಕವಿಯು 'ಶೈತನಸಾಂಗತ್ಯ'ವನ್ನು, ಸಾನಂದಶಿವಯೋಗಿಯು 'ವೀರಮಹೇಶ್ವರಾಚಾರ್ಯ ಸಾರೋದ್ಧಾರ'ಕ್ಕೆ ವ್ಯಾಖ್ಯಾನವನ್ನು ರಚಿಸಿದುದು ಇದೇ ಕಾಲದಲ್ಲಿ. ನೀಲಕಂಠಾಚಾರ್ಯನು ಮಲ್ಲಿಕಾರ್ಜುನನ ಮಹಾಮಂಡಲೇಶ್ವರ ವೀರನಂಜೇಂದ್ರ, ಒಡೆಯರ ಆಶ್ರಯದಲ್ಲಿ 'ಆರಾಧ್ಯಚರಿತ್ರೆ'ಯನ್ನು ರಚಿಸಿದನು.

ವಿಜಯನಗರದ ಉತ್ತರಾಧಿಕಾರಿಯಾಗಿ ಸ್ಥಾಪಿತರಾದ ಕೆಳದಿಯ ಪಾಳೆಯಗಾರರು ವೀರಶೈವಕ್ಕೆ ವಿಶೇಷ ಸಹಾಯ ಮಾಡಿದರು. ದೇಶದಾದ್ಯಂತ ಸಂಚಾರ ಮಾಡಿ ಅನೇಕ ಪುಣ್ಯಕ್ಷೇತ್ರಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಹಲವು ಧಾರ್ಮಿಕ ಗ್ರಂಥಗಳು ಇವರ ಪ್ರೋತ್ಸಾಹದಿಂದ ರಚಿತವಾದುವು. 'ಶಿವತತ್ತ್ವ ರತ್ನಾಕರ'ದ ಕರ್ತೃವಾದ ಬಸವರಾಜ, ಪರ್ವತ ಶಿವಯೋಗಿ, ಮೋನಪುನಿರ್ವಾಣ ಮಂತ್ರಿ – ಮೊದಲಾದವರು ಕೆಳದಿಯರಸರ ಕಾಲದವರು. ಈ ಕಾಲದಲ್ಲಿಯೇ ಹಲವು ಪಾಳೆಯಗಾರರು ಲಿಂಗವಂತರಾದರು. ಮೈಸೂರರಸರು ೧೭೦೪ ರವರೆಗೆ ಶುದ್ಧಲಿಂಗವಂತರೇ ಆಗಿದ್ದರು. ಕೊಡಗುರಾಜರು, ಶರಸಿಂಗಿ, ಕಿತ್ತೂರು, ರಾಜ್ಯಾಧಿಕಾರಕ್ಕೆ ಬರುವವರೆಗೂ ವೀರಶೈವಮತವು ಬಹಳ ಪ್ರಾಬಲ್ಯದಲ್ಲಿಯೇ ಇತ್ತು. ಅಲ್ಲಿಂದ ಮುಂದೆ ಅವರ ವೈಭವವು ಕಡಿಮೆಯಾದರೂ ಇಂದಿಗೂ ಕರ್ನಾಟಕದ ಎಲ್ಲಾ ಭಾಗದಲ್ಲಿಯೂ, ವೀರಶೈವಮತವು ಬಹು ವೈಭವಯುಕ್ತವಾಗಿದ್ದು ಆ ಮತೀಯರು ಅಧಿಕ ಸಂಖ್ಯೆಯಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ವ್ಯವಸಾಯ ಮತ್ತು ವಾಣಿಜ್ಯಕ್ಷೇತ್ರಗಳಲ್ಲಿ ಅತ್ಯಂತ ಪ್ರಮುಖರಾಗಿದ್ದಾರೆ. ★

# ಶ್ರೀಮದ್ಭಗವದ್ಗೀತೆ

## ೧೮ ನೆಯ ಅಧ್ಯಾಯ

ಅರ್ಜುನ ಉವಾಚ—

ಸಂನ್ಯಾಸಸ್ಯ ಮಹಾಬಾಹೋ
ತತ್ತ್ವಮಿಚ್ಛಾಮಿ ವೇದಿತುಮ್ ।
ತ್ಯಾಗಸ್ಯ ಚ ಹೃಷೀಕೇಶ
ಪೃಥಕ್ಕೇಶಿನಿಷೂದನ ॥

ಅರ್ಜುನ: ಕೃಷ್ಣ, ಇಂದ್ರಿಯಗಳೊಡೆಯ, ಕೇಶಿ ಎಂಬವನನ್ನು ಕೊಂದವನೆ, ಸಂನ್ಯಾಸವೆಂಬ ಮಾತಿನ ಮತ್ತು ತ್ಯಾಗವೆಂಬ ಮಾತಿನ ನಿಜವಾದ ಸ್ವರೂಪವನ್ನು ಬೇರೆ ಬೇರೆಯಾಗಿ ತಿಳಿಯಲಿಚ್ಛಿಸುತ್ತೇನೆ.

ಶ್ರೀಭಗವಾನುವಾಚ—

ಕಾಮ್ಯಾನಾಂ ಕರ್ಮಣಾಂ ನ್ಯಾಸಂ
ಸಂನ್ಯಾಸಂ ಕವಯೋ ವಿದುಃ ।
ಸರ್ವಕರ್ಮಫಲತ್ಯಾಗಂ
ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨

ಶ್ರೀಕೃಷ್ಣ: ಫಲದ ಬಯಕೆಯಿಂದ ಮಾಡುವ ಕರ್ಮಗಳನ್ನು ಬಿಡುವುದು ಸಂನ್ಯಾಸವೆಂದು ಪಂಡಿತರು ತಿಳಿದಿರುವರು. ಎಲ್ಲ ಕರ್ಮಗಳಲ್ಲಿಯೂ ಫಲವನ್ನು ಬಯಸದಿರುವುದನ್ನು ತ್ಯಾಗವೆಂದು ವಿವೇಕಿಗಳು ಹೇಳುವರು.

ತ್ಯಾಜ್ಯಂ ದೋಷವದಿತ್ಯೇಕೇ
ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃಕರ್ಮ
ನ ತ್ಯಾಜ್ಯಮಿತಿ ಚಾಪರೇ ॥ ೩

ಕರ್ಮಗಳೆಂಬುವೆಲ್ಲ ದೋಷದಿಂದ ಕೂಡಿದವುಗಳಾದ್ದರಿಂದ ಬಿಡತಕ್ಕದ್ದೆಂದು ಕೆಲವರು ವಿದ್ವಾಂಸರು ಹೇಳುತ್ತಾರೆ. ಇನ್ನು ಕೆಲವರು ಯಜ್ಞ, ದಾನ, ತಪಸ್ಸು ಇವುಗಳನ್ನು ಬಿಡತಕ್ಕದ್ದಲ್ಲವೆನ್ನುವರು.

ನಿಶ್ಚಯಂ ಶೃಣು ಮೇ ತತ್ರ
ತ್ಯಾಗೇ ಭರತಸತ್ತಮ ।
ತ್ಯಾಗೋ ಹಿ ಪುರುಷವ್ಯಾಘ್ರ
ತ್ರಿವಿಧಃ ಸಂಪ್ರಕೀರ್ತಿತಃ ॥ ೪

ಅರ್ಜುನ, ಬಿಡುವುದರ ಸಂಬಂಧವಾದ ಈ ವಿಷಯದಲ್ಲಿ ನನ್ನ ನಿಶ್ಚಯವನ್ನು ಕೇಳು. ಅರ್ಜುನ, ತ್ಯಾಗದಲ್ಲಿ ಮೂರು ಬಗೆ ಎಂದು ಪ್ರಸಿದ್ಧವಾಗಿದೆ.

ಯಜ್ಞದಾನತಪಃಕರ್ಮ
ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ
ಪಾವನಾನಿ ಮನೀಷಿಣಾಮ್ ॥ ೫

ಯಜ್ಞ, ದಾನ, ತಪಸ್ಸು ಎಂಬ ಕರ್ಮಗಳು ಬಿಡತಕ್ಕವುಗಳಲ್ಲ. ಅವು ಮಾಡಲೇಬೇಕಾದವು. ಯಜ್ಞವೂ ದಾನವೂ ತಪಸ್ಸೂ ತಿಳುವಳಿಕೆಯುಳ್ಳವರಿಗೆ ಚಿತ್ತಶುದ್ಧಿಯನ್ನು ಉಂಟುಮಾಡುವುವು.

ಏತಾನ್ಯಪಿ ತು ಕರ್ಮಾಣಿ
ಸಂಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ
ನಿಶ್ಚಿತಂ ಮತಮುತ್ತಮಮ್ ॥ ೬

ಅರ್ಜುನ, ನಾನು ಮಾಡುವವನೆಂಬ ಅಭಿಮಾನ



ವನ್ನೂ ಫಲದ ಬಯಕೆಯನ್ನೂ ಬಿಟ್ಟು ಈ ಕರ್ಮಗಳನ್ನು ಮಾಡಬೇಕೆಂಬುದು ನಾನು ಗೊತ್ತುಮಾಡಿಕೊಂಡಿರುವ ಉತ್ತಮಾಭಿಪ್ರಾಯ.

ನಿಯತಸ್ಯ ತು ಸಂನ್ಯಾಸಃ
ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಃ
ತಾಮಸಃ ಪರಿಕೀರ್ತಿತಃ ॥ ೭

ಶಾಸ್ತ್ರದಲ್ಲಿ ಮಾಡಬೇಕೆಂದು ಹೇಳಿರುವ ಕರ್ಮಗಳನ್ನು ಬಿಡುವುದು ಸರಿಯಲ್ಲ. ತಪ್ಪು ತಿಳುವಳಿಕೆಯಿಂದ ಅವುಗಳನ್ನು ಬಿಡುವುದು ತಾಮಸವೆನಿಸುವುದು.

ದುಃಖಮಿತ್ಯೇವ ಯತ್ಕರ್ಮ
ಕಾಯಕ್ಲೇಶಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ
ನೈವ ತ್ಯಾಗಫಲಂ ಲಭೇತ್ ॥ ೮

ಇದನ್ನು ಮಾಡುವುದು ಕಷ್ಟವೆಂಬ ಮಾತ್ರದಿಂದ ಯಾವ ಕರ್ಮವನ್ನು ಶರೀರಕ್ಕೆ ಆಯಾಸವಾಗುವುದೆಂದು ಯಾವನು ಬಿಡುತ್ತಾನೋ ಅವನು ರಜೋಗುಣದಿಂದ ಅದನ್ನು ಬಿಟ್ಟವನಾಗುತ್ತಾನೆ. ಎಂದಿಗೂ ಅವನು ಈ ತ್ಯಾಗದ ಫಲವನ್ನು ಪಡೆಯಲಾರ.

ಕಾರ್ಯಮಿತ್ಯೇವ ಯತ್ಕರ್ಮ
ನಿಯತಂ ಕ್ರಿಯತೇಽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ
ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯

ಅರ್ಜುನ, ಯಾವನು ಮಾಡಲೇಬೇಕೆಂದು ಗೊತ್ತಾಗಿರುವ ಯಾವ ಕರ್ಮವನ್ನು ತನ್ನ ಕರ್ತವ್ಯವೆಂದು ತಿಳಿದು ತಾನು ಮಾಡುವವನೆಂಬ ಅಭಿಮಾನವನ್ನೂ ಫಲದ ಬಯಕೆಯನ್ನೂ ಬಿಟ್ಟು ಮಾಡುತ್ತಾನೋ ಅವನ ತ್ಯಾಗವು ಸಾತ್ತ್ವಿಕವೆನಿಸುವುದು.

ನ ದ್ವೇಷ್ಟ್ಯಕುಶಲಂ ಕರ್ಮ
ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ತ್ವಸಮಾವಿಷ್ಟೋ
ಮೇಧಾವೀ ಛಿನ್ನಸಂಶಯಃ ॥ ೧೦

ಸಾತ್ತ್ವಿಕವಾಗಿ ಬಿಟ್ಟವನು ಸತ್ತ್ವಗುಣದಿಂದ ತುಂಬಿತುಳುಕುವವನಾಗಿಯೂ ಬುದ್ಧಿ ಉಳ್ಳವನಾಗಿಯೂ ಇದ್ದು, ಇದು ತನ್ನನ್ನು ಸಂಸಾರಕ್ಕೆ ತಳ್ಳುವ ಫಲದ ಸೆಳೆತ ಉಳ್ಳದ್ದೆಂದು, ಅದರ ಮೇಲೆ ಹಗೆತನವನ್ನೂ ಮಾಡುವುದಿಲ್ಲ; ಇದು ತನ್ನ ಚಿತ್ತಶುದ್ಧಿಯನ್ನು ಮಾಡುವುದೆಂದು ಅದರ ಮೇಲೆ ಅತಿ ಪ್ರೀತಿಯನ್ನೂ ಮಾಡುವುದಿಲ್ಲ.

# ಕರ್ಮದ ಬಿಡುಗಡೆ

ನ ಹಿ ದೇಹಭೃತಾ ಶಕ್ಯಂ
ತ್ಯಕ್ತುಂ ಕರ್ಮಾಣ್ಯಶೇಷತಃ ।
ಯಸ್ತು ಕರ್ಮಫಲತ್ಯಾಗೀ
ಸ ತ್ಯಾಗೀತ್ಯಭಿಧೀಯತೇ ॥ ೧೧

ದೇಹಧಾರಿಗಳು ಕರ್ಮಗಳನ್ನು ತೀರ ಬಿಡುವುದೆಂಬುದು ಸಾಧ್ಯವೇ ಇಲ್ಲ. ಯಾವನು ಫಲದ ಬಯಕೆಯನ್ನು ಬಿಡುತ್ತಾನೋ ಅವನೇ ಕರ್ಮತ್ಯಾಗಿ ಎನಿಸುವನು.

ಅನಿಷ್ಟಮಿಷ್ಟಂ ಮಿಶ್ರಂ ಚ
ತ್ರಿವಿಧಂ ಕರ್ಮಣಃ ಫಲಮ್ ।
ಭವತಿ ತ್ಯಾಗಿನಾಂ ಪ್ರೇತ್ಯ
ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨

ಕರ್ಮವನ್ನು ತೀರ ಬಿಡದವರಿಗೆ ಕರ್ಮದ ಫಲವು ಅವರು ಸತ್ತಮೇಲೆ ಅವರಿಗೆ ಬೇಡವೆನಿಸಿದಂಥದ್ದೆಂದೂ ಮತ್ತು ಅವೆರಡರ ಸರಿ ಬೆರಕೆಯೆಂದೂ ಮೂರು ಬಗೆಯಾಗಿ ಗಂಟು ಬೀಳುತ್ತದೆ. ತೀರ ಬಿಟ್ಟವರಿಗೆ ಎಷ್ಟು ಮಾತ್ರವೂ ಗಂಟು ಬೀಳುವುದಿಲ್ಲ.

ಪಂಚೈತಾನಿ ಮಹಾಬಾಹೋ
ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ
ಸಿದ್ಧಯೇ ಸರ್ವಕರ್ಮಣಾಮ್ ॥ ೧೩

ಅರ್ಜುನ, ಯಾವ ಕರ್ಮವು ನೆರವೇರಬೇಕಾದರೂ ಮುಂದೆ ಹೇಳುವ ಐದು ಕಾರಣಗಳಿರುವುವೆಂದು ವೇದಾಂತಶಾಸ್ತ್ರದಲ್ಲಿ ಹೇಳಿರುವುದೆಂದು ನನ್ನ ಮಾತಿನಿಂದ ತಿಳಿ.

ಅಧಿಷ್ಠಾನಂ ತಥಾ ಕರ್ತಾ
ಕರಣಂ ಚ ಪೃಥಗ್ವಿಧಮ್ ।
ವಿವಿಧಾಶ್ಚ ಪೃಥಕ್ಚೇಷ್ಟಾಃ
ದೈವಂ ಚೈವಾತ್ರ ಪಂಚಮಮ್ ॥ ೧೪

ದೇಹ, ಜೀವ, ಬೇರೆ ಬೇರೆ ಇಂದ್ರಿಯಗಳು, ದೈಹಿಕ ವ್ಯಾಪಾರಗಳು ಮತ್ತು ಐದನೆಯದು ಅದೃಷ್ಟ.

ಶರೀರವಾಙ್ಮನೋಭಿರ್ಯತ್
ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ
ಪಂಚೈತೇ ತಸ್ಯ ಹೇತವಃ ॥ ೧೫

ಮನುಷ್ಯನು ಶರೀರದಿಂದಲೂ ಮನಸ್ಸಿನಿಂದಲೂ ಶಾಸ್ತ್ರಕ್ಕೆ ಒಪ್ಪಿದ ಅಥವಾ ಒಪ್ಪದ ಯಾವ ಕರ್ಮವನ್ನು ಮೊದಲು ಮಾಡುತ್ತಾನೋ ಅದಕ್ಕೆ ಈ ಐದು ಕಾರಣಗಳು.

ತತ್ರೈವಂ ಸತಿ ಕರ್ತಾರಂ
ಆತ್ಮಾನಂ ಕೇವಲಂ ತು ಯಃ ।
ಪಶ್ಯತ್ಯಕೃತಬುದ್ಧಿತ್ವಾತ್
ನಸ ಪಶ್ಯತಿ ದುರ್ಮತಿಃ ॥ ೧೬

ಹೀಗಿರುವಾಗ ಯಾವನು ಬುದ್ಧಿಗೆ ತಕ್ಕ ಸಂಸ್ಕಾರವಿಲ್ಲದ್ದರಿಂದ ತಾನೇ ಮಾಡುವವನೆಂದು ತಿಳಿಯುತ್ತಾನೋ ಆ ಕೀಳು ಬುದ್ಧಿಯವನು ನಿಜವನ್ನು ತಿಳಿದಿಲ್ಲ.

ಯಸ್ಯ ನಾಹಂಕೃತೋಭಾವೋ
ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಪಿ ಸ ಇಮಾನ್ ಲೋಕಾನ್
ನ ಹಂತಿ ನ ನಿಬಧ್ಯತೇ ॥ ೧೭

ಯಾವನಿಗೆ ದೇಹ ಮೊದಲಾದವುಗಳಲ್ಲಿ ತಾನೆಂಬ ಅಭಿಮಾನದ ಕಲ್ಪನೆ ಇಲ್ಲವೋ ಮತ್ತು ಯಾವನು ಕರ್ಮಫಲದ ಸೋಂಕನ್ನು ಹೊಂದುವುದಿಲ್ಲವೋ ಅವನು ಈ ಎಲ್ಲ ಪ್ರಾಣಿಗಳನ್ನು ಕೊಂದರೂ ಕೊಂದ ಹಾಗಲ್ಲ. ಅವನು ಕಟ್ಟಿಗೊಳಪಡುವುದಿಲ್ಲ.

ಜ್ಞಾನಂ ಜ್ಞೇಯಂ ಪರಿಜ್ಞಾತಾ
ತ್ರಿವಿಧಾ ಕರ್ಮಚೋದನಾ ।
ಕರಣಂ ಕರ್ಮ ಕರ್ತೇತಿ
ತ್ರಿವಿಧಃ ಕರ್ಮಸಂಗ್ರಹಃ ॥ ೧೮

ತಿಳಿವಳಿಕೆ, ತಿಳಿಯಬೇಕಾದ್ದು, ತಿಳಿಯುವವನು– ಈ ಮೂರನ್ನು ಅನುಸರಿಸಿ ಕರ್ಮವಿಧಿಗಳು ಪ್ರವೃತ್ತವಾಗಿದೆ. ಇಂದ್ರಿಯಗಳು, ಕ್ರಿಯೆಗಳು ಕೆಲಸ ಮಾಡುವವನು– ಈ ಮೂರು ಕರ್ಮಗಳನ್ನು ನೆರವೇರಿಸುವವು.

ಜ್ಞಾನಂ ಕರ್ಮ ಚ ಕರ್ತಾ ಚ
ತ್ರಿಧೈವ ಗುಣಭೇದತಃ ।
ಪ್ರೋಚ್ಯತೇ ಗುಣಸಂಖ್ಯಾನೇ
ಯಥಾವಚ್ಛೃಣು ತಾನ್ಯಪಿ ॥ ೧೯

ತಿಳುವಳಿಕೆಯೂ, ಕೆಲಸವೂ, ಮಾಡುವವನೂ ಇವರು ಗುಣಗಳ ಭೇದದಿಂದ ಮೂರು ಬಗೆಗಳೆಂದು ಗುಣಗಳ ವಿಷಯವಾದ ಶಾಸ್ತ್ರವು ಹೇಳುವುದು. ಆ ವಿಷಯವನ್ನು ಅಲ್ಲಿ ಹೇಳಿರುವಂತೆ ಹೇಳುತ್ತೇನೆ; ಕೇಳು.

ಸರ್ವಭೂತೇಷು ಯೇನೈಕಂ
ಭಾವಮವ್ಯಯಮೀಕ್ಷತೇ ।
ಅವಿಭಕ್ತಂ ವಿಭಕ್ತೇಷು
ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦

ಭಿನ್ನಭಿನ್ನವಾಗಿರುವ ಎಲ್ಲ ವಸ್ತುಗಳಲ್ಲಿ ಏಕರೂಪವಾಗಿ ನಾಶವಿಲ್ಲದ್ದಾಗಿ ಅಖಂಡವಾಗಿರುವ ಭಗವತ್ತತ್ತ್ವವನ್ನು ಯಾವ ತಿಳುವಳಿಕೆಯು ನೋಡುತ್ತದೋ ಅದನ್ನು ಸಾತ್ತ್ವಿಕವೆಂದು ತಿಳಿ.

ಪೃಥಕ್ತ್ವೇನ ತು ಯಜ್ಜ್ಞಾನಂ
ನಾನಾಭಾವಾನ್ ಪೃಥಗ್ವಿಧಾನ್ ।
ವೇತ್ತಿ ಸರ್ವೇಷು ಭೂತೇಷು
ತಜ್ಜ್ಞಾನಂ ವಿದ್ಧಿ ರಾಜಸಮ್ ॥ ೨೧

ಎಲ್ಲ ಪ್ರಾಣಿಗಳಲ್ಲಿಯೂ ಭಿನ್ನಭಿನ್ನರಾದ ಜೀವರಲ್ಲಿ ಸ್ವತಂತ್ರವಾದ ಅಸ್ತಿತ್ವವನ್ನು ಯಾವ ತಿಳುವಳಿಕೆಯು ನೋಡುತ್ತದೋ ಅದನ್ನು ರಾಜಸವೆಂದು ತಿಳಿ.

# ತಿರುಪತಿಯಲ್ಲಿ ಲಾಡು

ತಿರುಮಲೆಯಲ್ಲಿನ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಹಾಗೂ ದೇವಾಲಯದ ಎದುರಿಗಿನ ಬ್ಯಾಂಕ್‌ನಲ್ಲಿ ಮಾತ್ರವೇ ದೊರೆಯುತ್ತಿದ್ದ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರಸಾದವಾದ ಲಾಡು ಈಗ ತಿರುಪತಿಯಲ್ಲೂ ದೊರೆಯುವಂತೆ ಯೋಜಿಸಲಾಗಿದೆ. ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲಿ ಈ ಲಾಡು ವಿಕ್ರಯಕ್ಕಾಗಿಯೇ ಪ್ರತ್ಯೇಕವಾಗಿ ಉಂಟು ಮಾಡಿರುವ ಕೌಂಟರಿನಲ್ಲಿ ಯಾತ್ರಿಕರು ಕೊಳ್ಳಬಹುದು.

**ಕೌಂಟರ್ ಕೆಲಸ ಮಾಡುವ ಕಾಲ: ಬೆ. 6 ರಿಂದ 7 ವರೆಗೆ**
**ಬೆ. 9 ರಿಂದ 12 ವರೆಗೆ**
**ಮ. 3 ರಿಂದ ಸಂ. 7 ವರೆಗೆ**

**ಬೆಲೆ: ರೂ. 3—00 (ಪ್ರತಿ ಲಾಡು)**

ಯತ್ತು ಕೃತ್ಸ್ನವದೇಕಸ್ಮಿನ್
ಕಾರ್ಯೇ ಸಕ್ತಮಹೈತುಕಮ್ ।
ಅತತ್ತ್ವಾರ್ಥವದಲ್ಪಂ ಚ
ತತ್ತಾಮಸ ಮುದಾಹೃತಮ್ ॥ ೨೨

ಎಲ್ಲವೂ ಬ್ರಹ್ಮವೆಂದು ತಿಳಿಯುವುದು, ಕಾರಣವಾದ ಭಗವಂತನನ್ನರಿಯದೆ ಬರಿಯ ಕಾರ್ಯ ಪ್ರಪಂಚದಲ್ಲಿ ಆಸಕ್ತಿ, ಯುಕ್ತಿಗೆ ಸಿಕ್ಕದ ಅತಾತ್ತ್ವಿಕವಾದ ಕ್ಷುದ್ರ ವಿಚಾರಗಳು – ಈ ಬಗೆಯ ತಿಳುವಳಿಕೆ ತಾಮಸವೆಂದು ಪರಿಗಣಿತವಾಗಿದೆ.

ನಿಯತಂ ಸಂಗರಹಿತಂ
ಅರಾಗದ್ವೇಷತಃ ಕೃತಮ್ ।
ಅಫಲಪ್ರೇಪ್ಸುನಾ ಕರ್ಮ
ಯತ್ತತ್ ಸಾತ್ತ್ವಿಕ ಮುಚ್ಯತೇ ॥ ೨೩

ಯಾವಾಗಲೂ ಮಾಡತಕ್ಕದ್ದಾಗಿಯೂ, ಮಾಡುವವನೆಂಬ ಅಭಿಮಾನವಿಲ್ಲದ್ದಾಗಿಯೂ ಯಾವುದೊಂದು ಪ್ರೀತಿಯ ಮತ್ತು ಹಗೆತನದ ಸಂಬಂಧವಿಲ್ಲದೆ ಫಲಾಪೇಕ್ಷೆ ಇಲ್ಲದೆ ಮಾಡಿದ್ದಾಗಿಯೂ ಇರುವ ಕರ್ಮವು ಸತ್ತ್ವಗುಣದ್ದೆನಿಸುವುದು.

ಯತ್ತು ಕಾಮೇಪ್ಸುನಾ ಕರ್ಮ
ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ
ತದ್ರಾಜಸಮುದಾಹೃತಮ್ ॥ ೨೪

ಯಾವ ಕರ್ಮವು ಫಲದ ಬಯಕೆಯಿಂದಲೂ ಗರ್ವದಿಂದಲೂ ಆಯಾಸದಿಂದ ಮಾಡಲಾಗುವುದೋ ಅದು ರಾಜಸವೆನಿಸುವುದು.

ಅನುಬಂಧಂ ಕ್ಷಯಂ ಹಿಂಸಾಂ
ಅನಪೇಕ್ಷ್ಯ ಚ ಪೌರುಷಮ್ ।
ಮೋಹಾದಾರಭ್ಯತೇ ಕರ್ಮ
ಯತ್ತಾಮಸ ಮುದಾಹೃತಮ್ ॥ ೨೫

ಮುಂದೇನಾದೀತೆಂಬುದನ್ನೂ, ತನಗೆ ಎಷ್ಟು ಶ್ರಮವೆಂಬುದನ್ನೂ ಎಣಿಕೆಗೆ ತಂದುಕೊಳ್ಳದೆ ಅವಿವೇಕದಿಂದ ಯಾವ ಕರ್ಮಕ್ಕೆ ಕೈಹಾಕಲಾಗುವುದೋ ಅದು ತಾಮಸವೆನಿಸುವುದು.

ಮುಕ್ತಸಂಗೋಽನಹಂವಾದೀ
ಧೃತ್ಯುತ್ಸಾಹಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ
ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬

ಫಲದ ಬಯಕೆಯನ್ನು ಬಿಟ್ಟು, ತಾನು ಮಾಡುವವನೆಂಬ ಅಭಿಮಾನವನ್ನೂ ತಾಳದೆ ಹಿಡಿದ ಪಟ್ಟನ್ನು ಬಿಡದೆ ಉತ್ಸಾಹದಿಂದ ಕೂಡಿ ಫಲವಾದರೂ ಆಗದಿದ್ದರೂ ಮನಸ್ಸಿನ ಏರಿಳಿತಗಳಿಲ್ಲದೆ ಮಾಡುವವನು ಸಾತ್ತ್ವಿಕನೆನಿಸುವನು.

ರಾಗೀ ಕರ್ಮಫಲಪ್ರೇಪ್ಸುಃ
ಲುಬ್ಧೋ ಹಿಂಸಾತ್ಮಕೋಽಶುಚಿಃ ।
ಹರ್ಷಶೋಕಾನ್ವಿತಃ ಕರ್ತಾ
ರಾಜಸಃ ಪರಿಕೀರ್ತಿತಃ ॥ ೨೭

ಸುಖದ ಮೇಲೆ ಪ್ರೀತಿ ಇಟ್ಟುಕೊಂಡು ಕರ್ಮದ ಫಲವನ್ನು ಬಯಸುವವನಾಗಿ ಕೆಟ್ಟ ಆಸೆಯಿಂದ ಮತ್ತೊಬ್ಬರ ಬಾಳನ್ನು ಕೆಡಿಸುವವನಾಗಿ ಮನಸ್ಸಿನ ಶುಚಿ ಇಲ್ಲದೆ ಉಬ್ಬುತ್ತ ತಗ್ಗುತ್ತ ಮಾಡುವವನು ರಜೋಗುಣದವನೆನಿಸುವನು.

ಅಯುಕ್ತಃ ಪ್ರಾಕೃತಃ ಸ್ತಬ್ಧಃ
ಶಠೋನೈಷ್ಕೃತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ
ಕರ್ತಾ ತಾಮಸ ಉಚ್ಯತೇ ॥ ೨೮

ತಕ್ಕಷ್ಟು ಎಚ್ಚರಿಕೆ ಇಲ್ಲದೆ ಶಾಸ್ತ್ರ ಸಂಸ್ಕಾರವನ್ನು ಪಡೆಯದೆ ಎದೆಯನ್ನು ಉಬ್ಬಿಸಿಕೊಂಡು ಮೋಸಗಾರನಾಗಿ, ಸೋಮಾರಿಯಾಗಿ, ಜೋಲುಮೋರೆಯಿಂದ ಆದರೆ ಸರಿ, ಮಾಡಿದರೆ ಆಯಿತು ಎಂದು ದಿನ ಕಳೆಯುವವನು ತಮೋಗುಣದವನೆನಿಸುವನು.

ಬುದ್ಧೇರ್ಭೇದಂ ಧೃತೇಶ್ಚೈವ
ಗುಣತಸ್ತ್ರಿವಿಧಂ ಶೃಣು ।
ಪ್ರೋಚ್ಯಮಾನಮಶೇಷೇಣ
ಪೃಥಕ್ತ್ವೇನ ಧನಂಜಯ ॥ ೨೯

ಅರ್ಜುನ, ಗುಣಗಳ ಭೇದದಿಂದ ಮೂರು ಬಗೆಯಾಗಿರುವ ಬುದ್ಧಿಯ ಮತ್ತು ಧೈರ್ಯದ ಭೇದವನ್ನು ಕುರಿತು ಬೇರೆ ಬೇರೆಯಾಗಿ ಪೂರ್ಣವಾಗಿ ಹೇಳುತ್ತೇನೆ ಕೇಳು.

ಪ್ರವೃತ್ತಿಂ ಚ ನಿವೃತ್ತಿಂ ಚ
ಕಾರ್ಯಾಕಾರ್ಯೇ ಭಯಾಭಯೇ ।
ಬಂಧಂ ಮೋಕ್ಷಂ ಚ ಯಾ ವೇತ್ತಿ
ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೦

ಅರ್ಜುನ, ಕರ್ಮಗಳಲ್ಲಿ ಪ್ರವೃತ್ತಿಯನ್ನೂ ನಿವೃತ್ತಿ ಮಾರ್ಗವನ್ನೂ, ಮಾಡತಕ್ಕದ್ದನ್ನೂ ಮಾಡಲು ಅಯೋಗ್ಯವಾದ್ದನ್ನೂ (ಕರ್ಮಫಲದಿಂದ ಆಗುವ) ಭಯವನ್ನೂ (ತಾನು ಮಾಡುವವನಲ್ಲ ಎಂಬುದರಿಂದಾಗುವ) ಅಭಯವನ್ನೂ, ಮೋಕ್ಷವನ್ನೂ (ಮಾಡುವವನೆಂಬಭಿಮಾನದಿಂದಾಗುವ) ಬಂಧನವನ್ನೂ ತಿಳಿಯುವ ಬುದ್ಧಿಯು ಸಾತ್ತ್ವಿಕವು.

ಯಯಾ ಧರ್ಮಮಧರ್ಮಂ ಚ
ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ಪ್ರಜಾನಾತಿ
ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧

ಅರ್ಜುನ, ಯಾವ ಬುದ್ಧಿಯಿಂದ ಶಾಸ್ತ್ರಕ್ಕೆ ಒಪ್ಪಿದ್ದು ಯಾವುದೆಂಬುದನ್ನೂ, ಒಪ್ಪದ್ದು ಯಾವುದೆಂಬುದನ್ನೂ, ಮಾಡಬಹುದಾದ್ದು ಯಾವುದು ಎಂಬುದನ್ನೂ, ಮಾಡಬಾರದ್ದು ಯಾವುದೆಂಬುದನ್ನೂ, ಇದು ಹೀಗೆಯೇ ಸರಿಯೆಂದು ನಿರ್ಣಯವಿಲ್ಲದೆ ತಿಳಿಯಲಾಗುವುದೋ ಆ ಬುದ್ಧಿಯು ರಾಜಸವೆನಿಸುವುದು.

ಅಧರ್ಮಂ ಧರ್ಮಮಿತಿ ಯಾ
ಮನ್ಯತೇ ತಮಸಾವೃತಾ ।
ಸರ್ವಾರ್ಥಾನ್ ವಿಪರೀತಾಂಶ್ಚ
ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨

ಅರ್ಜುನ, ಯಾವ ಬುದ್ಧಿಯು ಅಜ್ಞಾನವೆಂಬ ಕತ್ತಲೆಯ ಮುಸುಕಿನೊಳಗೆ ಸಿಕ್ಕಿ ಶಾಸ್ತ್ರಕ್ಕೆ ಒಪ್ಪದ್ದನ್ನು ಒಪ್ಪಿದುದೆಂದು, ಎಲ್ಲವನ್ನೂ ವಿಪರೀತವಾಗಿ ತಿಳಿಯುತ್ತದೋ ಅದು ತಾಮಸವೆನಿಸುವುದು.

ಧೃತ್ಯಾ ಯಯಾ ಧಾರಯತೇ
ಮನಃಪ್ರಾಣೇಂದ್ರಿಯಕ್ರಿಯಾಃ ।
ಯೋಗೇನಾವ್ಯಭಿಚಾರಿಣ್ಯಾ
ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩

ಅರ್ಜುನ, ದಾರಿ ತಪ್ಪಿ ನಡೆಯದ ಯಾವ ಧೃತಿಯಿಂದ ಮನಸ್ಸಿನ, ಪ್ರಾಣಗಳ ಮತ್ತು ಇಂದ್ರಿಯಗಳ ವ್ಯಾಪಾರವೆಲ್ಲ ಹಿಡಿತದಲ್ಲಿಟ್ಟುಕೊಳ್ಳಲಾಗುತ್ತದೋ ಆ ಧೈರ್ಯ ಸಾತ್ತ್ವಿಕವೆನಿಸುವುದು.

ಯಯಾ ತು ಧರ್ಮಕಾಮಾರ್ಥಾನ್
ಧೃತ್ಯಾ ಧಾರಯತೇಽರ್ಜುನ ।
ಪ್ರಸಂಗೇನ ಫಲಾಕಾಂಕ್ಷೀ
ಧೃತಿಃ ಸಾ ಪಾರ್ಥ ರಾಜಸೀ ॥ ೩೪

ಅರ್ಜುನ, ಯಾವ ಧೃತಿಯಿಂದ ಧರ್ಮ, ಅರ್ಥ, ಕಾಮ – ಈ ಮೂರೇ ತಾನು ಪಡೆಯತಕ್ಕವುಗಳೆಂದು ತಿಳಿದಿರುವನೋ ಮತ್ತು ಸಮಯ ಬಂದರೆ ಫಲವನ್ನೂ ಬಯಸುವನೋ ಆ ಧೃತಿ ರಾಜಸವೆನಿಸುವುದು.

ಯಯಾ ಸ್ವಪ್ನಂ ಭಯಂ ಶೋಕಂ
ವಿಷಾದಂ ಮದಮೇವ ಚ ।
ನ ವಿಮುಂಚತಿ ದುರ್ಮೇಧಾಃ
ಧೃತಿಃ ಸಾ ಪಾರ್ಥ ತಾಮಸೀ ॥ ೩೫

ಅರ್ಜುನ, ತಿಳಿಗೇಡಿಯು ಯಾವ ಧೃತಿಯಿಂದ ನಿದ್ರೆಯನ್ನೂ ಹೆದರಿಕೆಯನ್ನೂ ದುಃಖವನ್ನೂ ಜೋಲುಮುಖವನ್ನೂ ಸೊಕ್ಕನ್ನೂ ಬಿಡುವುದಿಲ್ಲವೋ ಆ ಧೃತಿ ಖಲ – ತಾಮಸವೆನಿಸುವುದು.

–(ಸಶೇಷ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ;

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯುವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯುವರೆಗೆ ಕೆಲಸಮಾಡುತ್ತದೆ.

## ಹರಿದಾಸವಾಣಿ

ಹರಿದಾಸರಿಗೂ ತಿರುಪತಿಗೂ ನಿಕಟವಾದ ಸಂಬಂಧವಿದೆ. ತಿರುಪತಿ ಪ್ರಾಂತವನ್ನು ಪಾಲಿಸಿದ ಸಾಳ್ವ ನರಸಿಂಹರಾಯನ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿದ ಕೀರ್ತಿ ಹರಿದಾಸರಾದ ಶ್ರೀ ಪಾದರಾಯರಿಗೆ ಸಲ್ಲುತ್ತದೆ. ಶ್ರೀನಿವಾಸನ ಪೂಜೆ ಕ್ರಮವಾಗಿ ನಡೆಯುವಂತೆ ಸುಧಾರಣೆ ಮಾಡಿದ ಕೀರ್ತಿ ವ್ಯಾಸರಾಯರಿಗೆ ಸೇರುತ್ತದೆ. ಹರಿದಾಸರ ಸಮೂಹದಲ್ಲಿ ಅಧಿಕವಾದ ಪ್ರೀತಿಯಿಂದ ಕೀರ್ತನೆಗಳನ್ನು ಶ್ರೀನಿವಾಸನ ಮೇಲೆ ಹಾಡಿದ ಕೀರ್ತಿ ಪುರಂದರದಾಸರಿಗೆ ಮಾತ್ರವೇ. ಅದೇ ರೀತಿಯಲ್ಲಿ ಕನಕದಾಸರಿಗೂ ತಿರುಪತಿಯ ಸಂಬಂಧ ಉಂಟು.

ತಿಮ್ಮಪ್ಪ, ತನ್ನ ಕಡೆ ಬರುವನೆಂದು ಶ್ರೀನಿವಾಸ ನಿರೀಕ್ಷಿಸಿದ್ದ. ಕನಕನಾಯಕ ಬರಲಿಲ್ಲ. ಪರಮಾತ್ಮನಿಗೆ ಬೇಸರವಾಯಿತು. ತಾನೇ ಕನಸಿನಲ್ಲಿ ಕಾಣಿಸಿಕೊಂಡು "ನನ್ನ ದಾಸನಾಗೋ" ಎಂದು ಆದೇಶ ನೀಡಿದ. ಆದರೆ ಕನಕನಾಯಕನಿಗೆ ಆ ಮಾತು ಅರುಚಿ ಆಯಿತು. ಒಂದೆರಡು ಬಾರಿ ಮತ್ತೆ ಕನಸಿನಲ್ಲಿ ಹಿತ ಹೇಳಿದ. ಆದರೆ ನಿಷ್ಫಲವಾಯಿತು. ಮುಂದೊಮ್ಮೆ ನೆರೆಯ ಗ್ರಾಮದವರೊಂದಿಗೆ ಗಡಿಸಂಬಂಧದಲ್ಲಿ ವ್ಯಾಜ್ಯ ಉಂಟಾಯಿತು. ಕದನದಲ್ಲಿ ಕನಕದಾಸನ ಸ್ಮೃತಿ ತಪ್ಪಿತು. ಮತ್ತೊಂದು ಸಲ ಶ್ರೀನಿವಾಸನು ಗುರ್ತು ಮಾಡಿದ. ಆವಾಗ್ಗೆ ಕನಕನಾಯಕನಿಗೆ ಅಹಂಕಾರ ಹೋಯಿತು. ಆದಿಕೇಶವನ ದಾಸನಾದ. ಕಾಗಿನೆಲೆಯಲ್ಲಿ

ಗಳಿಗೆ ಕನಸಿನಲ್ಲಿ ಆದೇಶ ನೀಡಿದ. ಅಧಿಕಾರಿಗಳು ಹಾಗೇ ಮಾಡಿದರು. [illegible] ಅವರಿಗೆ ಕನಕದಾಸರು ಯಾರೆಂದೇ ಗೊತ್ತಿಲ್ಲ. ಅಷ್ಟರಲ್ಲಿ ದಾಸರನ್ನು ಸ್ವಾಮಿ ಕನಕದಾಸರು ಎಲ್ಲಿ ಬರುತ್ತಿದ್ದಾರೆಂದು ಕೇಳಿದರು. ಅವರು 'ಮುಂದೆ ಬರುವವರಿಗೆ ಹಿಂದೆ, ಹಿಂದೆ ಬರುವವರಿಗೆ ಮುಂದೆ' ಎಂದು ನುಡಿದರು, ಅವರ ಮಾತಿನಲ್ಲಿದ್ದ ಅಂತರಾರ್ಥವನ್ನು ಅಧಿಕಾರಿಗಳು ಅರಿಯಲಿಲ್ಲ. ಕನಕದಾಸರು ತಿರುಮಲೆ ಸೇರಿದರು. ಸ್ವಾಮಿ ಸಂದರ್ಶನ ಆಗಲಿಲ್ಲ. ಅವರು ಬೇಸರದಿಂದ 'ವೆಂಕಟರಮಣ ನಿನ್ನ ಮರೆವೆನೆಂದು ಬರಹೇಳಿ ಇಲ್ಲಿ ಅನ್ನವಿಲ್ಲದೆ ಕೊಲ್ಲುವೆಯಾ' ಎಂದು ವೇದನೆ ಪಟ್ಟರು. ಆಗ ಸ್ವಾಮಿ ತಾನೇ ಸೇವಕನ ಹಾಗೆ ಬಂದು ದಿವ್ಯ ಮೃಷ್ಟಾನ್ನ

# ತಿರುಪತಿಯಲ್ಲಿ ಕನಕದಾಸರು

ಕನ್ನಡ ಸಾಹಿತ್ಯದಲ್ಲಿ ಕನಕದಾಸ ಮತ್ತು ಕಾಗಿನೆಲೆ ಈ ಎರಡು ಶಬ್ದಗಳು ಅವಳಿ ಜವಳಿಯಾಗಿ ಕಾಣುವುವು. ಆ ಕನಕದಾಸನು ಶ್ರೀನಿವಾಸನ ಅನುಗ್ರಹದಿಂದ ಹುಟ್ಟಿದವನು. ಅವನ ಪೂರ್ವಾಶ್ರಮದ ಹೆಸರು ತಿಮ್ಮಪ್ಪ. ಅವನ ತಂದೆ ಬೀರಪ್ಪ. ಮಕ್ಕಳಿಲ್ಲದ ಚಿಂತೆ ತಾಯಿತಂದೆಯರಿಗೆ ಇದ್ದ ವೇಳೆ ಅವರು ತಿರುಪತಿಗೆ ಹೊರಟರು. ಮಗು ಹುಟ್ಟಿದರೆ ದೇವರ ಹೆಸರು ನಾಮಕರಣ ಮಾಡುವುದಾಗಿ ಪ್ರಾರ್ಥನೆ ಮಾಡಿಕೊಂಡರು. ಪ್ರಾರ್ಥನೆ ಸಫಲವಾಯಿತು. ಆದರೆ ತಾಯಿತಂದೆಯರಾಗಲೀ ತಿಮ್ಮಪ್ಪನಾಗಲೀ ತಿರುಪತಿ ಪ್ರಯಾಣ ಮಾಡಲಿಲ್ಲ. ಕಾಲಾನಂತರದಲ್ಲಿ ತಾಯಿ ತಂದೆಯರು ತೀರಿಹೋದರು. ತಿಮ್ಮಪ್ಪನಿಗೆ ತಿರುಪತಿ ಪ್ರಯಾಣದ ನೆನಪಿಲ್ಲ. ಕಾಲ ಕಳೆದು ಹೋಯಿತು. ತಿಮ್ಮಪ್ಪ ಕನಕನಾಯಕನಾದ. ಧಣಾಯಕನಾದ.

ಸ್ವಾಮಿ ಸೇವೆಯಲ್ಲಿ ಕಾಲ ಕಳೆಯುತ್ತಿದ್ದ. ಒಂದು ದಿನ ಕಾಗಿನೆಲೆ ಗ್ರಾಮಸ್ಥರು ತಿರುಪತಿಗೆ ಪ್ರಯಾಣವಾದರು. ಅವರ ಗೋವಿಂದ ನಾಮ ಸಂಕೀರ್ತನೆಯಲ್ಲಿ ತನ್ನ ಜನ್ಮವೃತ್ತಾಂತ ಕನಕದಾಸರಿಗೆ ಗೋಚರವಾಯಿತು. ತಾನೂ ತಿರುಪತಿಗೆ ಪ್ರಯಾಣ ಮಾಡಲು ಆಲೋಚನೆ ಮಾಡುತ್ತಾ ಇದ್ದ. ಆಗ ಶ್ರೀನಿವಾಸನು ಕನಕದಾಸರ ಕನಸಿನಲ್ಲಿ ಕಾಣಿಸಿಕೊಂಡು 'ಕನಕಾ; ನನ್ನ ವಿವಾಹ ಮಹೋತ್ಸವಕ್ಕೆ ಬಾರೋ' ಎಂದು ಆಹ್ವಾನಿಸಿದ. ಕನಕದಾಸರಿಗೂ ಕಲ್ಯಾಣ ಮಹೋತ್ಸವ ನೋಡಬೇಕೆಂದು ಆಶೆ ಉಂಟಾಯಿತು. ದಾಸರು ಹೊರಟರು. ಸಕಲ ಮರ್ಯಾದೆಗಳಿಂದ ಕನಕದಾಸರನ್ನು ಸತ್ಕರಿಸಬೇಕೆಂದು ಶ್ರೀನಿವಾಸ ಅಧಿಕಾರಿ

ಡಾ॥ ಕೆ. ಸರ್ವೋತ್ತಮನ್

ಭೋಜನ ಮಾಡಿಸಿ ತಾನು ಹೊದೆಯುವ ಜರತಾರಿ ವಸ್ತ್ರವನ್ನು ಹೊದಿಸಿ ಆದರಿಸಿದ. ದೇವಾಲಯದಲ್ಲಿ ಕೋಲಾಹಲ ಉಂಟಾಯಿತು. ದಿವ್ಯ ರೇಷ್ಮೆ ವಸ್ತ್ರ ಅದೃಶ್ಯವಾಯಿತು. ಅಧಿಕಾರಿಗಳು ಶೋಧನೆ ಮಾಡತೊಡಗಿದರು. ಆ ಮೇಲೆ ಕನಕದಾಸರನ್ನು ಕಂಡರು. ಅವರೇ ಕಳ್ಳರೆಂದು ತೀರ್ಮಾನಿಸಿದರು. ಅವರನ್ನು ಹೊಡೆಯಲಿಕ್ಕೆ ಸಿದ್ಧವಾದರು. ಅದೇ ಸಮಯ ದೇವರ ವಿಗ್ರಹದ ಮೇಲೆ ಗಾಯಗಳು ಮೂಡ ತೊಡಗಿದವು. ಅದನ್ನು ಕಂಡು ಅಧಿಕಾರಿಗಳು ಹೆದರಿಹೋದರು. ಕನಕದಾಸರನ್ನು ಗುರ್ತಿಸಿ ಕ್ಷಮೆ ಕೇಳಿದರು.

ಕನಕದಾಸರು ಹಾಡಿದ ಶ್ರೀನಿವಾಸನ ಕೀರ್ತನೆಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು. ಸ್ವೀಯ ವೃತ್ತಾಂತ ಕೀರ್ತನೆಗಳು, ದಶಾವತಾರ ಕೀರ್ತನೆಗಳು, ಲಾಲಿ ಹಾಡುಗಳು. ಸ್ವೀಯ ವೃತ್ತಾಂತ

ಕೀರ್ತನೆಗಳಲ್ಲಿ ಕನಕದಾಸರ ಜೀವನ ಸಂಘಟನೆಗಳು ಗೋಚರವಾಗುತ್ತವೆ. ಆದರ ವಿಲ್ಲದೆ, ಊಟವಿಲ್ಲದೆ, ಬೆಟ್ಟದ ಮೇಲೆ ಕನಕ ದಾಸರು ಶ್ರೀನಿವಾಸದೇವರನ್ನು ನಿಂದಾಸ್ತುತಿ ಯಿಂದ ಹಾಡಿದ ವೇಳೆ, ಸ್ವಾಮಿ ಪಾಚಕ ವೇಷದಲ್ಲಿ ಬಂದು ಪ್ರಸಾದ ಕೊಟ್ಟರೆಂದು ಹೇಳಿಕೆ. ದೇವರನ್ನು ಲೋಭಿಯಾಗಿ ಚಿತ್ರಿಸುವುದು ಈ ಹಾಡಿನ ವಿಶೇಷ.

ಬಂದೆವಯ್ಯಾ ಗೋವಿಂದ ಶೆಟ್ಟಿ
ಇಂದು ನಿಮ್ಮ ಹರಿವಾಣ
ಪ್ರಸಾದವುಂಟೆನಲಾಗಿ
ಅಪ್ಪವು ಅತಿರಸ ತುಪ್ಪವು ಬಿಸಿಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪರೂಪವಾದ ಕಜ್ಜಾಯಗಳನೆಲ್ಲ
ಜಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ
ಒಡೆದ ಮಡಕೆಯಲ್ಲಿ ಅರಿಸಿ
ನಾಮವ ಮಾಡಿ
ಕೊಡುವೆ ನೀ ಕಾಸಿಗೆ ಬಂದೊಂದನು
ಒಡಲು ತುಂಬಿ ಮಿಕ್ಕ ಓಗರ ಮಾರಿಸಿ
ಒಡವೆಯ ಗಳಿಸುವ
ಕಡುಲೋಭಿ ಶೆಟ್ಟಿ
ಶೇಷಗಿರಿಯಲ್ಲಿ ವಾಸ ಮಾಡಿಕೊಂಡು
ದೇಶ ದೇಶಕ್ಕೆ ಹೆಸರಾದ ಸೆಟ್ಟಿ
ಕಾಸು ಕಾಸಿಗೆ ಬಡ್ಡಿ
ಗಳಿಸಿಕೊಂಬ ಆದಿ
ಕೇಶವ ನಾರಾಯಣ ತಿಮ್ಮ ಶೆಟ್ಟಿ

ಪುರಂದರದಾಸರು ಇದೇ ರೀತಿಯಲ್ಲಿ ದೇವರನ್ನು "ಧರಣಿಗೆ ದೊರೆಯೆಂದು ನಂಬಿದೆ ಇಂಥ ಲೋಭಿಯೆಂದು ಅರಿಯೆ" ಎಂದು ನಿಂದಾಸ್ತುತಿ ಹಾಡಿದ್ದಾರೆ. ಶ್ರೀನಿವಾಸ ದೇವರ ಕಲ್ಯಾಣಕ್ಕಾಗಿ ದಾಸರು ತಿರುಮಲೆ ಬಂದಿದ್ದರೆಂಬುವುದು ಸತ್ಯ. ಕೇದಾರ ಗೌಳರಾಗದಲ್ಲಿ ಹಾಡಿದ 'ಶಿರಿಯ ಮದುವೆ ಮುಕುಂದ ನಿನ್ನ ಚರಣ ಸೇವಕನ ಬಿನ್ನಹ ಪರಾಕೆಲೊ ದೇವ' ಕೀರ್ತನೆ ಇದಕ್ಕೆ ಸಾಕ್ಷಿ.

ದೇವಸ್ಥಾನ ಅಧಿಕಾರಿಗಳು ಕನಕದಾಸ ರನ್ನು ಕಳ್ಳನೆಂದು ಬಾಧಿಸುವಾಗ ಹಾಡಿದ ಹಾಡು ಈ ವರ್ಗದಲ್ಲಿ ಸೇರುತ್ತದೆ.

ಗೋವಿಂದ ಗೋವಿಂದ
ಎನ್ನಲರಿಯದೆ ವೃಥಾ
ನೋವಿಂದ ಭಂಗವ ಪಡುವುದುಚಿತವೆ
ವೇದೋಕ್ತ ಪೂಜೆಯಲಿ ತೃಪ್ತಿ ಪಡಿಸಿದರೆ
ಆದುದೇನು ಅದರಿಂದ ಫಲವಾವುದು
ನಾದವ ಕೇಳ್ದ ಹರಿಣನಂತೆ
ಕೆಡದೆ – ಮಧು
ಸೂದನನ ನಾಮ ಸ್ಮರಣೆಯ ಮಾಡೋ

ಇನ್ನೊಂದು ಬಗೆಯೆಂದರೆ, ಭಗವಂತನು ಸರ್ವ ಶ್ರೇಷ್ಠನು. ಜೀವಾತ್ಮ ಪರಾಧೀನ ವಾದವನು. ತನ್ನಲ್ಲಿ ಅವಗುಣಗಳನ್ನು ಆರೋಪಿಸಿಕೊಂಡು ಪರಮಾತ್ಮನ ಹಿರಿಮೆಯನ್ನು ಹೊಗಳುವುದು ಭಕ್ತಿ ಸಂಪ್ರದಾಯವೇ. ಉದಾಹರಣೆಗೆ–

ಹರಿ ಮುಕುಂದನು ನೀನು
ನರಜನ್ಮ ಹುಳು ನಾನು
ಪರಮ ಜ್ಯೋತಿಯು ನೀನು
ತಿರಿದುಂಬ ತಿರುಕನು ನಾನು
ಕಂಬದಲಿ ಬಂದ ಆನಂದ
ಮೂರುತಿ ನೀನು
ನಂಬಿಕಿಲ್ಲದ ಪ್ರಪಂಚಕನು ನಾನು
ಈರೇಳು ಭುವನ ದೊಳು ಇರುವ
ಮೂರುತಿ ನೀನು
ದೂರಿ ನಿನ್ನನು ಬೈಯ್ವ ದುಷ್ಟ ನಾನು

— ಇದೇ ರೀತಿ ತನ್ನ ಕಾಯಬೇಕೆಂದು ಪರಮಾತ್ಮನ ಹೆದರಿಸುವುದು ಮತ್ತೊಂದು ಬಗೆ. ಉದಾಹರಣೆಗೆ

ಭಕುತ ವತ್ಸಲನೆಂಬ
ಬಿರುದು ಬೇಕಾದಡೆ
ಶಕುತ ಸುಮ್ಮನೆ ಕಾಯೋ
ಸುಲಭದಿಂದ
ಸುಕೃತ ಶರಣರು ನಿಮ್ಮ
ನೆನೆವರ್ಕೆ ಶೇಷಗಿರಿ
ಪ್ರಕಟವಾಸವಾದಿ ಕೇಶವ ವೆಂಕಟೇಶ

ಕಾಯಜ ಜನಕ ಒಡೆಯ ಆದಿಕೇಶವ
ರಾಯ ನೀನಲ್ಲದೆ ನರರು ಸ್ವತಂತ್ರರೆ

ಕನಕದಾಸರ ಶ್ರೀನಿವಾಸ ಸಂಕೀರ್ತನೆ ಗಳಲ್ಲಿ ಹೃದ್ಯವಾದವು ದಶಾವತಾರ ಕೀರ್ತನೆ ಗಳು. ಹರಿದಾಸ ಸಾಹಿತ್ಯಕ್ಕೆ ರಾಮಾಯಣ, ಮಹಾಭಾರತ ಹಾಗೂ ಭಾಗವತ ಈ ಪುರಾಣತ್ರಯಗಳು ಆಧಾರ ಗ್ರಂಥಗಳು. ಆದ್ದರಿಂದ ಅವುಗಳನ್ನು ಹರಿದಾಸರು ತಮ್ಮ ಭಕ್ತಿಮಾರ್ಗದ ಮಾಧ್ಯಮಗಳನ್ನಾಗಿ ಬಳಸಿ ಕೊಂಡಿದ್ದಾರೆ. ವಿಶೇಷತಃ ಅವರು ಹರಿಯ ಅವತಾರಗಳನ್ನು ಒಪ್ಪಿಕೊಂಡವರು. ಆದ್ದ ರಿಂದ ಹರಿಯ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವ, ರಾಮ, ಕೃಷ್ಣ, ಬುದ್ಧ, ಕಲ್ಕಿ, ಅವತಾರಗಳನ್ನು ಭಕ್ತಿಯಿಂದ ಹಾಡಿದ್ದಾರೆ. ಕೆಲವು ಪ್ರಾರ್ಥನೆ ರೂಪವಾಗಿ, ಕೆಲವು ವಾತ್ಸಲ್ಯ ಭಾವ

(25ನೇ ಪುಟ ನೋಡಿ)

# ಕಾಟುಕುಕ್ಕೆ ಸುಬ್ರಾಯದೇವರು

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕಿನಲ್ಲಿ ಕುಮಾರಪರ್ವತದ ತಪ್ಪಲಲ್ಲಿ ಜಗತ್ಪ್ರಸಿದ್ಧವಾಗಿರುವ ಶ್ರೀಸುಬ್ರಹ್ಮಣ್ಯ ಕ್ಷೇತ್ರ ಕುಕ್ಕೆ. ಆ ಕ್ಷೇತ್ರ ಈಗ ಸುಬ್ರಮಣ್ಯ ಎಂದೇ ಪ್ರಸಿದ್ಧವಾಗಿದೆ. ಅದರಷ್ಟೇ ಪವಿತ್ರವಾದ, ಆದರೆ ಅಷ್ಟೊಂದು ಖ್ಯಾತಿಗೆ ಬಾರದ ಇನ್ನೊಂದು ಕ್ಷೇತ್ರ ಕಾಸರಗೋಡು ತಾಲೂಕಿನ ಕಾಟುಕುಕ್ಕೆ. ವಿಟ್ಲದಿಂದ ಕಾಸರಗೋಡಿಗೆ ಹೋಗುವ ರಸ್ತೆಯಲ್ಲಿ ಅಡ್ಕಸ್ಥಳ ಎಂಬಲ್ಲಿಂದ ಸುಮಾರು ಎರಡು ಮೈಲು ದೂರದಲ್ಲಿ ಈ ಕ್ಷೇತ್ರ ರಾರಾಜಿಸುತ್ತದೆ.

ಭತ್ತದ ಗದ್ದೆಗಳು, ಅಡಿಕೆ ತೋಟಗಳು ಹಾಗೂ ತೆಂಗಿನ ಮರಗಳಿಂದ ಸುತ್ತುವರಿಯಲ್ಪಟ್ಟು ಈ ಸ್ಥಳ ಬಹಳ ರಮ್ಯವಾಗಿದೆ. ಪಶ್ಚಿಮ, ಉತ್ತರ ಮತ್ತು ಪೂರ್ವ ದಿಕ್ಕುಗಳಲ್ಲಿ ಹರಿಯುವ ನೀರಿನ ತೊರೆಗಳಿದ್ದು ಪುಣ್ಯಕ್ಷೇತ್ರಕ್ಕೆ ಯೋಗ್ಯವಾದ ಪರಿಸರವಿದೆ. ದೇವಾಲಯದ ತೆಂಕು ಮತ್ತು ಬಡಗು ದಿಕ್ಕುಗಳಲ್ಲಿ ಎರಡು ಅಶ್ವತ್ಥ ವೃಕ್ಷಗಳಿರುವುದು ಇನ್ನೂ ಶ್ರೇಷ್ಠ.

ಈ ಕ್ಷೇತ್ರ ಯುಗಾರಂಭದಿಂದಲೂ ಶಿವಕ್ಷೇತ್ರವಾಗಿತ್ತು, ಇಲ್ಲಿ ಋಷಿಪುಂಗವರು ವಾಸವಾಗಿದ್ದರು. ಆ ಕಾಲದಲ್ಲಿ ಇಲ್ಲಿ ವನದುರ್ಗೆ ಮತ್ತು ವನಶಾಸ್ತಾರ ಆರಾಧನೆ ನಡೆಯುತ್ತಿತ್ತು, ಇಲ್ಲಿ ಶ್ರೀ ಸುಬ್ರಹ್ಮಣ್ಯ ದೇವರ ಪ್ರತಿಷ್ಠಾಪನೆಗೆ ಸಂಬಂಧಿಸಿದಂತೆ ಒಂದು ಸ್ವಾರಸ್ಯಕರವಾದ ಕತೆ ಇದೆ:—

ಇಲ್ಲೇ ಸಮೀಪದ ಮಿತ್ತೂರು ಎಂಬಲ್ಲಿ ಓರ್ವ ಬ್ರಹ್ಮಚಾರಿ ತಪಸ್ವಿ ಇದ್ದ. ಆತನಿಗೆ ಇಲ್ಲಿ ಶ್ರೀ ಸುಬ್ರಹ್ಮಣ್ಯನನ್ನು ಆರಾಧಿಸಬೇಕೆನಿಸಿ ಕುಕ್ಕೆ ಸುಬ್ರಹ್ಮಣ್ಯ ಕ್ಷೇತ್ರಕ್ಕೆ ಹೋಗಿ ತನ್ನ ಉದ್ದೇಶವನ್ನು ತಿಳಿಸಿದನು. ಆಗ ಕುಕ್ಕೆ ದೇವಾಲಯದ ಅಧಿಕಾರಿಗಳು ಆತನಿಗೆ ಒಂದು ಬೆಳ್ಳಿ ಹೆಡೆಯನ್ನು ಕೊಟ್ಟು ಅದನ್ನು ಪೂಜಿಸುವಂತೆ ಹೇಳಿದರು. ಅದರಿಂದ ಸಂತೃಪ್ತನಾಗದ ಬ್ರಹ್ಮಚಾರಿಯು ತನ್ನ ತಪಃಶಕ್ತಿಯಿಂದ ಒಂದು ಜೀವಂತ ನಾಗನನ್ನು ಆಕರ್ಷಿಸಿ ತನ್ನೊಂದಿಗೆ ಕರೆತಂದು ತನ್ನ ಊರಲ್ಲಿ ನೆಲೆಸುವಂತೆ ಮಾಡಿ ಪೂಜಿಸತೊಡಗಿದನು ಮತ್ತು ಆ ಊರಿಗೆ ಚಾಟುಕುಕ್ಕೆ ಅಂದರೆ ಕುಕ್ಕೆಗೆ ಸರಿಸಾಟಿಯಾದ ಕುಕ್ಕೆ—ಎಂದು ಕರೆದನು. ಕಾಲಾಂತರದಲ್ಲಿ ಈ 'ಚಾಟುಕುಕ್ಕೆ'—'ಕಾಟುಕುಕ್ಕೆ' ಯಾಯಿತು.

**ಶ್ರೀ ಅಳಿಕೆ ಗಣಪತಿ ಭಟ್**

ವರ್ಷಗಳು ಉರುಳಿದಂತೆ ಕಾಟುಕುಕ್ಕೆ ಶ್ರೀ ಸುಬ್ರಾಯದೇವರ ಭಕ್ತರ ಸಂಖ್ಯೆ ಹೆಚ್ಚಾಗಿ ಮಿತ್ತೂರಿನ ಆ ಸಣ್ಣ ದೇವಾಲಯದಲ್ಲಿ ಸ್ಥಳಾವಕಾಶ ಸಾಕಾಗದಾಯಿತು. ಆಗ ಜನರೆಲ್ಲ ಸೇರಿ ಯೋಗ್ಯಸ್ಥಳದಲ್ಲಿ ವಿಶಾಲವಾದ ದೇವಾಲಯವನ್ನು ಕಟ್ಟಿಸಬೇಕೆಂದು ಯೋಚಿಸಿದರು ಮತ್ತು ಈ ಉದ್ದೇಶವನ್ನು ಅಂದಿನ ರಾಜನಾಗಿದ್ದ ಬಲ್ಲಾಳ ಅರಸನಲ್ಲಿ ಮೂಡಿಸಿದರು. ಅರಸನೂ ಅದಕ್ಕೊಪ್ಪಿದ. ಆದರೆ ಯೋಗ್ಯಸ್ಥಳವನ್ನು ಆರಿಸುವುದೊಂದು ಸಮಸ್ಯೆಯಾಯಿತು. ಆಗ ಜನರೆಲ್ಲ ಸೇರಿ ರಾಜನ ಮುಂದಾಳುತ್ವದಲ್ಲಿ ದೇವರಿಗೆ ಪೂಜೆ ಮಾಡಿ ಯೋಗ್ಯ ಸ್ಥಳವನ್ನು ತೋರಿಸಿಕೊಡಬೇಕೆಂದು ಪ್ರಾರ್ಥಿಸಿದರು. ಮರುದಿನ ಅಲ್ಲೇ ತುಸು ದೂರದಲ್ಲಿ (ಈಗ ದೇವಾಲಯವಿರುವ ಸ್ಥಳದಲ್ಲಿ) ಹುಲಿ ಮತ್ತು ದನ ಪರಸ್ಪರ ಪ್ರೀತಿಯಿಂದ ಒಟ್ಟಿಗೆ ಆಡುತ್ತಿರುವುದು ಕಾಣಿಸಿತು. ಆದುದರಿಂದ ದೇವಾಲಯದ ನಿರ್ಮಾಣಕ್ಕೆ ಅದುವೇ ಸೂಕ್ತ ಸ್ಥಳವೆಂದು ತೀರ್ಮಾನಿಸಿದರು.

ದೇವಾಲಯದ ನಿರ್ಮಾಣದ ಕೆಲಸ ಆರಂಭವಾದ ಸಮಯದಲ್ಲಿ ಆ ಊರಿನ ಕೆಲವು ಜನರು ಕಾಶಿಗೆ ಹೊರಟರು. ದಾರಿ



ಕಾಟುಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586-00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**
**ತಿ. ತಿ. ದೇ.**

ಯಲ್ಲಿ ಸಿಕ್ಕಿದ ಒಂದು ಸುಂದರ ವಿಗ್ರಹವನ್ನು ಅವರು ಕಾಶಿಯಿಂದ ಹಿಂತಿರುಗುವಾಗ ಕಾಟುಕುಕ್ಕೆಗೆ ತಂದು ದೇವಾಲಯದ ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸಿದರು. ಈಗಲೂ ಇರುವ ವಿಗ್ರಹ ಇದುವೇ. ಈ ವಿಗ್ರಹ ತುಂಬ ಸುಂದರವಾಗಿದೆ ಮತ್ತು ಶ್ರೇಷ್ಠ ಜಾತಿಯ ಶಿಲೆಯಿಂದ ಕಡೆದುದಾಗಿದೆ. ಈ ದೇವಸ್ಥಾನದ ನಿರ್ಮಾಣ ಸುಮಾರು 8 ನೇ ಶತಮಾನದಲ್ಲಿ ಆದುದೆಂದು ಅಂದಾಜಿಸಲಾಗಿದೆ.

ಇಲ್ಲಿಯ ದೇವರನ್ನು ಕುಕ್ಕೆಯಿಂದಲೇ ತಂದಿರುವ ಕಾರಣ ಕುಕ್ಕೆ ದೇವರಿಗೆ ಹೇಳಿದ ಹರಕೆಯನ್ನು ಕಾಟುಕುಕ್ಕೆಗೆ ಸಲ್ಲಿಸಿದರೆ ಸಾಕೆಂದು ಜನ ನಂಬುತ್ತಾರೆ.

ಸುಮಾರು ಒಂದು ನೂರು ವರ್ಷಗಳ ಹಿಂದೆ ದೇವಸ್ಥಾನ ಜೀರ್ಣೋದ್ಧಾರವಾದುದಕ್ಕೆ ತಾಮ್ರಶಾಸನ ದೊರೆತಿದೆ. ಮತ್ತೆ 1979 ರಲ್ಲಿ ಜೀರ್ಣೋದ್ಧಾರವಾಗಿರುತ್ತದೆ. ಈಗ ನಿತ್ಯವೂ ಮೂರುಹೊತ್ತು ಪೂಜೆ ನಡೆಯುತ್ತದೆ. ಪ್ರತಿವರ್ಷ ಮಾರ್ಗಶಿರ ಶುದ್ಧ ತದಿಗೆಯಿಂದ ಸಪ್ತಮಿವರೆಗೆ ಉತ್ಸವ ನಡೆಯುತ್ತದೆ. ಮೀನಮಾಸ 19 ನೇ ತೇದಿಯಂದು ಪ್ರತಿಷ್ಠಾಪನಾ ಮಹೋತ್ಸವವೂ ನಡೆಯುತ್ತದೆ. ಈ ಉತ್ಸವಗಳಿಗೆ ಐದಾರು ಸಹಸ್ರಕ್ಕೂ ಮೇಲ್ಪಟ್ಟು ಭಕ್ತರು ಬರುತ್ತಾರೆ.

ಮಡೆ ಸ್ನಾನ, ತುಲಾಭಾರ, ಕಾರ್ತೀಕ ಪೂಜೆಗಳು ಇಲ್ಲಿನ ವಿಶೇಷ ಸೇವೆಗಳು. ಬಂದ ಭಕ್ತರನ್ನು ಜಾತಿ ಭೇದವಿಲ್ಲದೆ ಆತ್ಮೀಯತೆಯಿಂದ ಕಾಣುವ ಅರ್ಚಕರು ಹಾಗೂ ಆಡಳಿತ ವರ್ಗ ಹಾಗೂ ಹಣಕ್ಕೆ ಪ್ರಾಧಾನ್ಯತೆ ಇಲ್ಲದೆ. ಭಕ್ತಿ ಸೇವೆಗಳಿಗೆ ಯೋಗ್ಯವಾದ ನಿರ್ಮಲ ವಾತಾವರಣ–ಇವು ಇಲ್ಲಿಯ ವಿಶೇಷಗಳು.



**ಸಪ್ತಗಿರಿಯ ಬಗ್ಗೆ**
**ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

# ಸೋಮದೇವನ ಅಕ್ರೂರಚರಿತೆ

ಸಂಪೂರ್ಣವಾಗಿ ಭಗವತದ ಕಥೆಯನ್ನು ಮೊದಲಬಾರಿಗೆ ಕನ್ನಡದಲ್ಲಿ ಕಾವ್ಯವಾಗಿ ಬರೆದು ತಂದ ಕೀರ್ತಿ ನಿತ್ಯಾತ್ಮ ಶುಕಯೋಗಿ ಎಂಬ ಕವಿಗೆ ಸಲ್ಲುತ್ತದೆ. ಸೋಮದೇವನ "ಅಕ್ರೂರಚರಿತೆ"ಗೆ ನಿತ್ಯಾತ್ಮನ ಭಾಗವತದ ಒಂದು ಪ್ರಸಂಗವೇ– ಗೋಕುಲ ನಿರ್ಗಮನ, ಕಂಸವಧೆ – ಪ್ರೇರಣೆ ಹಾಗೂ ಮೂಲ.

ಕವಿ ಕೃತಿಗೆ "ಅ ಕ್ರೂ ರ ಚ ರಿ ತೆ" ಎಂದು ಶೀರ್ಷಿಕೆ ಕೊಟ್ಟಿದ್ದರೂ, ಕಾವ್ಯದ ಗುರಿ ಕೃಷ್ಣ ಭಕ್ತನಾದ ಅಕ್ರೂರನ ಚರಿತ್ರೆ ಮಾತ್ರ ಆಗಿಲ್ಲ. ಕವಿಯೇ ಹೇಳುವಂತೆ 'ಕೃಷ್ಣಚರಿತದ ಶರಧಿ' ಯೊಳಗೆ ಅಕ್ರೂರಚರಿತ್ರೆಯೂ ಬಂದಿದೆ ಅಷ್ಟೆ. ಅಕ್ರೂರನ ಕೃಷ್ಣಭಕ್ತಿ, ಕವಿ ಚಿತ್ರಿಸುವ ಕೃಷ್ಣನ ಮಹಿಮಾಪ್ರದರ್ಶನಗಳ ಮುಂದೆ ಮಸುಳಿಸಿ ಹೋಗಿದೆಯೆಂದೇ ಹೇಳಬೇಕಾಗುತ್ತದೆ. ಒಟ್ಟಾಗಿ ಕಾವ್ಯವನ್ನು ಪರಿಶೀಲಿಸಿದಾಗ, ಕವಿ ನಿರೂಪಿಸ ಹೊರಟಿರುವ ಮುಖ್ಯ ಅಂಶಗಳು ಎರಡು. 1. ಕೃಷ್ಣನ ಪರಾಕ್ರಮದ ಚರಿತ್ರೆ, 2. ಕೃಷ್ಣನ ಅನುಗ್ರಹಕ್ಕೆ ಒಳಗಾಗುವ ಅಕ್ರೂರ, ಸುದಾಮ, ಗೋಪಿಯರು, ಕುಬ್ಜೆ, ಉಗ್ರಸೇನ ಮೊದಲಾದವರ ಭಕ್ತಿ ಪ್ರತಿಪಾದನೆ.

"ಅಕ್ರೂರಚರಿತೆ" ಒಂಭತ್ತು ಸಂಧಿಗಳ ಕಾವ್ಯ. ಇದರಲ್ಲಿ ಎರಡರಿಂದ ಎಂಟನೆಯ ಸಂಧಿಯವರೆಗಿನ ವಿಷಯಗಳು ಕಾವ್ಯದ ದೃಷ್ಟಿಯಿಂದ ಮುಖ್ಯ ವಾದುವು. ಎರಡನೆಯ ಸಂಧಿಯಲ್ಲಿ ಅಕ್ರೂರನ ದೈವಭಕ್ತಿ, ಹರಿ–ಅಕ್ರೂರರ ಸಂಬಂಧವೂ, ಮೂರನೆಯ ಸಂಧಿಯಲ್ಲಿ ನಂದ–ಯಶೋದೆಯರ ಕೃಷ್ಣಪ್ರೇಮ, ಕೃಷ್ಣ ಅಕ್ರೂರನಿಗೆ ಮಾಡುವ ನೀತಿ ಬೋಧೆಯೂ, ನಾಲ್ಕನೆಯ ಸಂಧಿಯಲ್ಲಿ ಗೋಪಿಯರ ಹರಿಪ್ರೀತಿಯೂ, ಐದನೆಯ ಸಂಧಿ ಯಲ್ಲಿ ಕೃಷ್ಣ ಅಕ್ರೂರನಿಗೆ ತೋರುವ ನಿಜರೂಪ ದರ್ಶನ ಹಾಗೂ ಅಕ್ರೂರನ ದೈವಪ್ರೇಮವೂ, ಆರನೆಯ ಸಂಧಿಯಲ್ಲಿ ಮಧುರೆಯ ವರ್ಣನೆ, ರಜಕ ವಧೆ, ಸುದಾಮನ ಕೃಷ್ಣಭಕ್ತಿ, ಹರಿಯಿಂದ ಸೈರೇಂಧ್ರಿಗೆ ಅನುಗ್ರಹವೂ, ಏಳನೆಯ ಸಂಧಿಯಲ್ಲಿ ಕೃಷ್ಣನಿಂದಾಗುವ ಕಂಸನ ಧನುರ್ಭಂಗವೂ, ಎಂಟನೆಯ ಸಂಧಿಯಲ್ಲಿ ಕುವಲಯಾಪೀಡನೆಂಬ ಆನೆಯ ವಧೆಯೂ, ಚಾಣೂರ ಮುಷ್ಟಿಕರನ್ನು ಕೃಷ್ಣ ಬಲರಾಮರು ಸೋಲಿಸುವುದೂ, ಕೃಷ್ಣ ನಿಂದ ಕಂಸನ ವಧೆಯಾಗುವುದೂ ಚಿತ್ರಿತವಾಗಿವೆ. ಕಡೆಯ ಸಂಧಿಯಲ್ಲಿ ಉಗ್ರಸೇನನ ಮರುಪಟ್ಟ, ಅಕ್ರೂರನಿಗೆ ಮಂತ್ರಿಪದವಿಯ ಚಿತ್ರಣವಿದೆ. ಒಟ್ಟಿನಲ್ಲಿ ಈ ಕಾವ್ಯದ ಕಥಾನಕ ಅಕ್ರೂರನ ಗೋಕುಲ ಪಯಣದಿಂದ ಆರಂಭವಾಗಿ ಕಂಸವಧೆ, ಅಕ್ರೂರನ ಮೇಲಿನ ಕೃಷ್ಣಾನುಗ್ರಹದೊಂದಿಗೆ ಕೊನೆಯಾಗುತ್ತದೆ.

ಭಾಗವತ ದಶಮಸ್ಕಂಧದ ಮೂವತ್ತೈದು ಅಧ್ಯಾಯಗಳಲ್ಲಿ ಬರುವ ಕೃಷ್ಣಜನನದ ಉದ್ದೇಶ, ಬಾಲಲೀಲೆಗಳು, ಕೃಷ್ಣಮರ್ದನಕ್ಕೆ ಕಂಸ ಕಳುಹಿಸಿದ ರಕ್ಕಸರನ್ನು ಕೃಷ್ಣ ನಾಶಮಾಡುವುದು ಇತ್ಯಾದಿ ವಿಷಯಗಳನ್ನು, ಸೋ ಮ ದೇ ವ ಮೊದಲ ಸಂಧಿಯ ಹದಿನೇಳು ಪ ದ್ಯ ಗ ಳ ಲ್ಲಿ ಚಿಕ್ಕದಾಗಿ, ಸರಳವಾಗಿ ಹೇಳಿ ಮುಗಿಸಿ, ತಾನು ಹೇಳಬೇಕಾದ ಕಥೆಗೆ ನೇರವಾಗಿ ಧಾವಿಸಿದ್ದಾನೆ. ತಾನೊಡ್ಡಿದ ಕಂಟಕಗಳನ್ನೆಲ್ಲ ಜಯಿಸುತ್ತ, ಹರ್ಷ ಚಿತ್ತನಾಗಿ ಗೋಕುಲದಲ್ಲಿ ತನ್ನ ಮೃತ್ಯುವಾಗಿ ಬೆಳೆಯುತ್ತಿರುವ ಕೃಷ್ಣನನ್ನು ಬೇರಾವ ಉಪಾಯ ದಿಂದ ಮುಗಿಸುವುದು ? ಎಂಬ ಕಂಸನ ಚಿಂತೆ ಯಿಂದ ಕಾವ್ಯದ ಕಥೆ ಆರಂಭವಾಗುತ್ತದೆ. ಚಿಂತೆಯಿಂದ ಬಸವಳಿದ ಕಂಸ, ತನ್ನ ಆಪ್ತೇಷ್ಟರು, ಮಂತ್ರಿಗಳೆಲ್ಲರೊಂದಿಗೆ ಚಿಂತಿಸಿ, ಒಂದು ತೀರ್ಮಾನಕ್ಕೆ ಬರುತ್ತಾನೆ. 'ಮಧುರೆಯಲಿ ಧನುಪರ್ವ ಸಂಭ್ರಮ ಅದಕೆ ಕೃಷ್ಣ ಬಲರಾಮ ರನ್ನು ಕರೆತರಬೇಕು' ಎಂಬುದೇ ಆ ತೀರ್ಮಾನ. ಕೃಷ್ಣನನ್ನು ಕರೆತರುವುದಕ್ಕಾಗಿ ತನ್ನ ಮಂತ್ರಿ ಯಾದ, ಕೃಷ್ಣಭಕ್ತ ಅಕ್ರೂರನನ್ನು ಕಂಸ ಗೋಕುಲಕ್ಕೆ ಕಳುಹಿಸುತ್ತಾನೆ.

ಕೃಷ್ಣನನ್ನು ಕರೆತರಲು ಹೊರಡುವ ಮೊದಲ ದಿನದ ಇರುಳು ಭಕ್ತ ಅಕ್ರೂರನಿಗಾದ ಸಂತಸ ಅಷ್ಟಿಷ್ಟಲ್ಲ. ಹರಿಯನ್ನು ಕಾಣಲು ಹೊರಟ ಅಕ್ರೂರನ ಮನಃಸ್ಥಿತಿಯ ಚಿತ್ರಣ ನಿತ್ಯಾತ್ಮನಲ್ಲಿ ದೀರ್ಘವಾಗಿ ಚಿತ್ರಿತವಾಗಿದೆ. ಆದರೆ ಈ ಚಿತ್ರ ವನ್ನು ಸೋಮದೇವ ಸಂಕ್ಷಿಪ್ತವಾಗಿ, ಬೇಕಾದಷ್ಟು ಮಾತ್ರ ಬಳಸಿಕೊಂಡು ಮೂಲಕ್ಕಿಂತ ಚೆನ್ನಾಗಿ ಚಿತ್ರಿಸಿದ್ದಾನೆ. ನಿತ್ಯಾತ್ಮ ಈ ಭಾಗದಲ್ಲಿ ಒಂದೇ ಭಾವವನ್ನು ಹಲವಾರು ಪದ್ಯಗಳಲ್ಲಿ ಬಳಸಿ ಎಳೆ ದಾಡಿದ್ದಾನೆ. ಆದರೆ ಸೋಮದೇವನ ಭಾವ ಸಾಂದ್ರವಾಗಿದೆ. ಅಚ್ಚುಕಟ್ಟಾಗಿದೆ. ಕೃಷ್ಣನನ್ನು ಕಾಣಹೊರಟ ಅಕ್ರೂರ "ಪರಮಾನಂದಮಯ ಶರಧಿಯಲಿ ಮುಳುಗುತ ಶಿರವನೊಲೆದೊಲೆದು ಇಂದು ನಾ ಸುಖಿಯಾದೆನ್ ಈ ಗೋವಿಂದನನು

**ಶ್ರೀಮತಿ ಎನ್. ಪುಷ್ಪ**

ಕಣ್ಣಾರೆ ಕಂಡಪೆನ್" ಎಂದು ನಲಿದಾಡುತ್ತಿದ್ದ. ಆದರೆ, ಈ ಸಂತೋಷದ ನಡುವೆಯೂ ಒಂದೊಮ್ಮೆ ತಾನು ಕಂಸನ ಆಳು ಎಂಬ ಭಾವ ದಿಂದ, ಕೃಷ್ಣ ತನ್ನನ್ನು ಅಲಕ್ಷಿಸಿದರೆ ಎಂಬ ಅಳುಕು, ಸಂಶಯಗಳು ಅಕ್ರೂರನ ತಲೆಯಲ್ಲಿ ಸುಳಿದುದೂ ಉಂಟು. ಆದರೆ ಮರುಕ್ಷಣದಲ್ಲೇ "ಸರ್ವಾತ್ಮನರಿಯನೆ ಭಕುತರಿಂಗಿತವ, ಹೆಸರು ಗೊಂಡರೆ ಭವಭಯವ ತಪ್ಪಿಸುವ ಹರಿ ಕಣ್ಣಾರೆ ಕಂಡರೆ ಬಿಸುಡುವನೆ" ಎಂದು ನೆಮ್ಮದಿಯನ್ನು ತಂದುಕೊಂಡ. ದೇವ ದೇವೋತ್ತಮನನ್ನು ನಾಳಿನ ಜಾವದಲ್ಲಿ ಕಾಣುತ್ತೇನೆಂದು ಅಡಿಗಡಿಗೆ ಬೆರಗಾಗುತ್ತ, ಅದೇ ಹಂಬಲದಲ್ಲಿ ರಾತ್ರಿಯೆಲ್ಲ ನಿದ್ದೆಯನ್ನೂ ತ್ಯಜಿಸಿ, ಬೆಳಗಾಗುವುದನ್ನೆ ನಿರೀಕ್ಷಿಸುತ್ತ ಕುಳಿತ. ಬೆಳಗಾದೊಡನೆ, ವಿಧಿತ ಸಂಧ್ಯಾವಂದನೆಯ ಮಾಡಿ ಹರಿಪದ ಸಮಾರಾಧನೆಯನ್ನು ನಡೆಸಿ, ಪುಳಕಿತನಾಗಿ ಮನೆಯನ್ನು ಬಿಟ್ಟು ಶುಭಲಗ್ನದಲ್ಲಿ ರಥವೇರಿದ. ದಾರಿಯುದ್ದಕ್ಕೂ ಅಕ್ರೂರನಿಗೆ ದೈವದ್ದೇ ಚಿಂತೆ. ಗೋಕುಲವನ್ನು ಸೇರುವವರೆಗೆ, ಕೃಷ ಮಹಿಮೆ ಗಳನ್ನು ಏಕಾಗ್ರಚಿತ್ತದಿಂದ ನೆನೆಯುತ್ತ ಬಂದ.

ಅಂತೂ ಆತುರಾತುರದಲ್ಲಿ ಅಕ್ರೂರ ಗೋಕುಲ ವನ್ನು ತಲುಪಿದ. ಹರಿ ನೆಲೆಸಿರುವ ಗೋಕುಲ ವೆಂದಮೇಲೆ ಅದರ ಸೌಂದರ್ಯದ ವರ್ಣನೆ ಮಾಡ ಬೇಕೆ ? "ಸುತ್ತ ಬಳಸಿದ ಚೂತವನದೊಳೊತ್ತಿ ನಲಿ ಪುತೆಸೆವ ಮಲ್ಲಿಗೆ ನರ್ತಿಸುವ ನವಿಲುಗಳು, ಕೋಗಿಲೆ ಗಳಪುವ ಅರಗಿಣಿಯ ಮೊತ್ತ ಮೊರೆವ ಮದಾಳಿ ರಮಿಸುವ ಮತ್ತಹಂಸೆಗಳಿಂದ ಮೆರೆದು ಯದೂತ್ತಮನ ಕಣ್ಮನವ ಸೆಳೆದುದು ನಗುತಿರ್ದ ನಕ್ರೂರ." ಗೋಕುಲದ ಗೋವುಗಳ ಚಿತ್ರವಂತೂ ನಯನಮನೋಹರ: "ತಾಯ ಬರವನು ಹಾರಿ ಹರಿದಂಬೇಯೆನುತ, ಹಟ್ಟಿಗಳ ಸುತ್ತಿ, ನವಾಯಿಯಲಿ ಪರಿದಾಡಿ, ಮಿಗೆ ಪುಟನೆಗೆದು, ಮೇಳಿಸುತ, ಆಯಸದಿ ಕುಡಿವಳ್ಳಿಹೊಯ್ಲಿನ, ಮೇಯಲರಿಯದ ವತ್ಸವಂದಾಶ್ರೀಯ ಮೊದ ಲೆಂಬಂತೆ ಮೆರೆದಿರೆ ಕಂಡನಕ್ರೂರ." ಹೀಗೆ ಗೋಕುಲದ ಸೌಂದರ್ಯವನ್ನು ಸವಿಯುತ್ತಾ ಮುಂದೆ ಸಾಗಿದ ಅಕ್ರೂರ ಗೋವುಗಳ ನಡುವಿದ್ದ ಹರಿಯನ್ನು ಕಂಡ. ಕವಿ ಕೊಡುವ ಹರಿಯ

ಚಿತ್ರವಿದು: "ಸುಳಿಗುರುಳ ಪೆರೆನೊಸಲನಾಟಿಸಿ ಹೊಳೆವ ಕಂಗಳ ಮಿಸುಪ ಕದಪಿನ ಲುಳಿತನಾಸಾಪುಟದ ಬಿಂಬಾಧರದ ಸೀಮೆಯ.ಲಿ ತೊಳಪ ದಶನಾವಳಿಗಳೊಪ್ಪುವ ಗಳದ ಸಿರಿ ನೆಲೆಸಿಪ್ಪ ವಕ್ಷಸ್ಥಳದ ಕೃಷ್ಣನ" ಕಂಡು ಅಕ್ರೂರ ಪುಳಕಿತನಾದ. ತನ್ನ ನೆಚ್ಚಿನ ದೈವವನ್ನು ಕಂಡದ್ದೆ, ಓಡಿಹೋಗಿ, ಪಾದದಲ್ಲಿ ಬಿದ್ದು "ದೇವದೇವ, ಜಯಜಯ ಜನಾರ್ದನ, ಸಾವು ಹುಟ್ಟಿಲ್ಲದ ಜಗನ್ಮಯ, ಕಾವುದೈ ಶರಣರನು ಕರುಣಾರ್ಣವ ಮಹಾಮಹಿಮ ಶ್ರೀ ವಧೂವರರ ಸಲಹು ಕೃಷ್ಣ ಕೃಪಾವಲೋಕನದಿಂದ ರಕ್ಷಿಸು ದೇವಕೀಸುತ" ಇತ್ಯಾದಿಯಾಗಿ ಒಂದೇಸಮನೆ ಸ್ತುತಿಸುತ್ತ ಹೊರಳಾಡತೊಡಗಿದ. ಹೀಗೆ ಮೇರೆಮೀರಿದ ಹರ್ಷದಲಿ ಮೈಮರೆದು ಭಕ್ತಿಭಾವದ ಉತ್ಕಟಾವಸ್ಥೆಯಲ್ಲಿ ಎಷ್ಟುಹೊತ್ತು ಹೊರಳಾಡುತ್ತಿದನೊ! ಕೃಷ್ಣ ಅವನನ್ನೆಬ್ಬಿಸಿದಾಗಲೇ ಜ್ಞಾನ ತಿಳಿದದ್ದು. ತನ್ನ ಭಕ್ತನಿಗೆ ಕೃಷ್ಣತೋರುವ ಒಲವಿನ ಚಿತ್ರ ಹೃದಯಸ್ಪರ್ಶಿಯಾಗಿದ್ದು. ಭಕ್ತ – ಭಗವಂತರ ಆತ್ಮೀಯ ಸಂಬಂಧವನ್ನು ಜೀವಂತವಾಗಿ ಚಿತ್ರಿಸುತ್ತದೆ: "ಕಂಡು ಹರಿ ನಸುನಗುತ ಭಕುತನ ಮಂಡೆಯನು ಹಿಡಿದೆತ್ತಿ ನಿಜದೋರ್ದಂಡದಲಿ ಬಿಗಿದಪ್ಪಿ, ತನುವಿನ ಧೂಳಿಯನು ತೊಡೆದು, ಚಂಡರುಚಿತಾಪದಲಿ ಬಳಲಿದೆ, ಉಂಡ ಹೊಲಬಿಲ್ಲ ಅಹಹ ದೇಹವ ದಂಡಿಸುವೆಯೇಕೆಂದು ಮಧುರೋಕ್ತಿಯಲಿ ಮನ್ನಿಸಿ", ಸುರರಿಗಭಯನೀಡಿದ ತನ್ನ ಹಸ್ತಗಳಿಂದ ಅವನ ಮೈಬೆವರನ್ನು ಒರೆಸಿ ಆದರದಿಂದ ಮಾತನಾಡಿಸಿದ. ಭಗವಂತರ ಕರಸ್ಪರ್ಶ, ಆದರಗಳಿಂದ ಕರಗಿಹೋದ ಅಕ್ರೂರನಿಗೆ ಮನ ಉಕ್ಕಿಬಂತು. ಕೊಂಚಹೊತ್ತು ದೈವಾನಂದವನ್ನು ಹೊಂದಿ, ನಂತರ ಹರಿಸಹಿತ ನಂದಗೋಪನಿದ್ದೆಡೆಗೆ ಬಂದ. ನಂದನಿಂದ ಪ್ರಿಯವಾದ ಆತಿಥ್ಯ ಮಧುರೋಕ್ತಿಗಳನ್ನು ಪಡೆದಮೇಲೆ ಬಿಲ್ಲಹಬ್ಬಕ್ಕೆ ಕಂಸ ಬಲರಾಮ ಕೃಷ್ಣರನ್ನು ಆಹ್ವಾನಿಸಿರುವುದನ್ನು ತಿಳಿಸಿದ.

ಸೋಮದೇವ ಚಿತ್ರಿಸಿರುವಷ್ಟು, ಆಕರ್ಷಕವಾದ ಗೋಕುಲದ ಚಿತ್ರ ನಿತ್ಯಾತ್ಮನ ಕನ್ನಡ ಭಾಗವತದಲ್ಲಿ ಇಲ್ಲ. ನಿತ್ಯಾತ್ಮನ ಭಾಗವತದಲ್ಲಿ ಅಕ್ರೂರ ಕಾಣುವ ಕೃಷ್ಣನ ವರ್ಣನೆ ದೀರ್ಘವಾಗಿ, ವೈಭವಯುತವಾಗಿದೆ. ಆದರೆ ಸೋಮದೇವನ ಕೃಷ್ಣನ ಚಿತ್ರ ಸರಳವಾಗಿದೆ. ಆದರೂ ತನ್ನ ಪ್ರತಿಭೆಯಿಂದ ಕವಿ ಸರಳತೆಯಲ್ಲೇ ರಮ್ಯತೆಯನ್ನು ಕಾಯ್ದಿದ್ದಾನೆ.

ಕಂಸನ ಆಹ್ವಾನವನ್ನು ಅಕ್ರೂರನ ಬಾಯಿಂದ ಕೇಳಿದ ನಂದಯಶೋದೆಯರ ಚಿಂತೆ ಹೇಳಲಾಗದಷ್ಟು. ಮಕ್ಕಳನ್ನು ಕಳುಹಿಸಿ ರಾಜ್ಯವಾಳುವುದು, ಜೀವಂತವಾಗಿರುವುದು ಅಸಾಧ್ಯವೆಂದು ನಂದನಿಗೆ ಅನಿಸಿದಂತೆ ಯಶೋದೆಯ ತಾಯಿ ಹೃದಯದ ಅಳಲೇ ಬೇರೆ ರೀತಿಯದು. ರಾಮ ಕೃಷ್ಣರನ್ನು ಕಳುಹಿಸಲು ಒಪ್ಪಲಿಲ್ಲ. ಕಡೆಗೆ ಅಕ್ರೂರ ಹರಿ ನಿಮಗೆ ಮಗನಲ್ಲ, ವಿಷ್ಣುರೂಪಿ, ಕಂಸಾಸುರನನ್ನು ಪರಿಹರಿಸಲು ಅವತಾರವೆತ್ತಿದ್ದಾನೆ ಎಂದು ಹೇಳಿ ನಂಬಿಸಿ, ಸಮಾಧಾನ ಪಡಿಸಿದ ನಂತರವೂ, ಮಗನನ್ನಗಲಲಾರದವಳಾಗಿ, ಕಂಬನಿದುಂಬಿ ಬಂದು ವಿಧಿಯಿಲ್ಲದೆ "ಅಸುರ ನಿಮಗುಪಹತಿಗಳನು ಚಿಂತಿಸದಿರಲಿ ನೀವೆ ವಿಜಯರಾಗಿ" ಎಂದು ಮಕ್ಕಳನ್ನು ಹಾರೈಸಿ ಕಳುಹಲು ಒಪ್ಪಿದಳು. ನಂತರ ಅಕ್ರೂರ ಕೃಷ್ಣನ ಬಳಿಬಂದು ಕೃಷ್ಣನ ಕೋರಿಕೆಯಂತೆ ಕಂಸ ಹಾಕಿ ಕೊಂಡಿರುವ ಯೋಜನೆಯನ್ನೆಲ್ಲ ತಿಳಿಸಿದ. "ದೇವ ನೀತಿಧರ್ಮವು ನೀವರಿಯದಿಹುದಿಲ್ಲ, ಮೂರ್ಖರು ನಾವು ನಮಗೆ ತಿಳಿಸಿ'' ಎಂದು ಅಕ್ರೂರ ಹೇಳಿದ್ದೆ, ಕವಿ ಒಂದು ಸಂದರ್ಭ ಸಿಕ್ಕಿತೆಂಬಂತೆ ಒಂದು ಸಂಧಿಯ ನಲವತ್ತೊಂದು ಪದ್ಯಗಳಲ್ಲಿ ಅಕ್ರೂರನಿಗೆ ಕೃಷ್ಣನಿಂದ ಪರಮ ಧರ್ಮ ನೀತಿರಹಸ್ಯವನ್ನು ಬೋಧಿಸಿದ್ದಾನೆ. ದೈವಮಹಿಮೆ ಭಕ್ತಿಗಳೇ ಪ್ರಧಾನವಾದ ಈ ಕಾವ್ಯದಲ್ಲಿ ಕೃಷ್ಣನ ಈ ಬೋಧೆಗೆ ಮಹತ್ವವಿದೆ.

ಈ ಧರ್ಮನೀತಿ ಬೋಧೆಯ ಭಾಗ ನಿತ್ಯಾತ್ಮನ ಭಾಗವತದಲ್ಲಿಲ್ಲ. ಇದು ಸೋಮದೇವನ ಸ್ವಂತ ಸೃಷ್ಟಿಯಾದದ್ದು, ಕವಿಗೆ ದೈವದ ಮೇಲಿರುವ ಧೋರಣೆಗಳನ್ನು ತಿಳಿಸುವಲ್ಲಿ ಸಹಕಾರಿಯಾಗಿದೆ. ಅಲ್ಲದೆ ಕೃಷ್ಣನ ಈ ನೀತಿ, ಧರ್ಮ ಬೋಧೆ ಸಕಲ ಮನುಷ್ಯಜಾತಿಗೂ ಅನ್ವಯಿಸುವಂತಿದೆ. ಉದಾಹರಣೆಗೆ ಒಂದು ಪದ್ಯವನ್ನು ನೋಡಿ; "ಅಲಸಿಕೆಗೆ ನ್ಯೆಗೊಡದೆ ಲೋಭದ ಬಲೆಗೆ ಬೀಳದೆ ಚಿತ್ತದಲಿ ಸಂಚಲತೆಯಿಲ್ಲದೆ ಮತ್ಪದಾಂಬುಜ ಸೇವೆಯನು ಬಿಡದೆ ಹಲವ ಬಯಸದೆ ಪುಣ್ಯಪಾಪದ ನೆಲೆಯನರಿದಿಹ ಪರವಗೆಲ್ಲುವ ಗೆಳೆಯನೆನ್ನವನಾತನಾನಕ್ರೂರ ಕೇಳೆಂದ''

ಸಕಲಸಿದ್ಧತೆಗಳನ್ನೂ ಮಾಡಿಕೊಂಡನಂತರ ಬಲರಾಮಕೃಷ್ಣರು, ಮಧುರೆಗೆ ಹೊರಡಲು ಉದ್ಯುಕ್ತರಾದರು. ತಾಯಿಯಿಂದ ಬೀಳ್ಕೊಂಡು ಕೃಷ್ಣ ತನಗೆ ಪ್ರಿಯವಾದ ತುರುಗಳನ್ನು ಸಮಾಧಾನಪಡಿಸಿ, ಕರುಗಳ ಮೈದಡವಿ, ಮುಖ್ಯ ಹಿರಿಯರಿಗೆ ಹೇಳಿ, ಕೆಲಮಂದಿ ಗೋಪಾಲಕರೊಂದಿಗೆ ಹೊರಟ. "ಎಲ್ಲಿ ಹರಿಯಿಹನಲ್ಲಿಯೇ ಸುಖ'' ವೆಂದು ನಂಬಿದ್ದ ಗೋಪಿಯರಿಗೆ ಕೃಷ್ಣ ಮಧುರೆಗೆ ಹೊರಡುವ ಸಮಾಚಾರ ಹೇಗೋ ತಿಳಿಯಿತು. ಕೃಷ್ಣನ ವಿರಹತಾಪವನ್ನ ಅವರಿಗೆ ತಡೆಯಲು ಆಗಲೇ ಇಲ್ಲ. ಹೇಗಿದ್ದರೋ ಹಾಗೆಯೇ ಅಂದರೆ ಒಸರಿಸಿದ ಉಡುಗೆಗಳ, ಕೆದರಿದ ಕೇಶಪಾಶದ ಕಂದಿದಾಸ್ಯದ ಸೂಚಿಸುವ ಅಂತಃ ಕರಣವುಳ್ಳವರಾಗಿ ಕೃಷ್ಣನ ಬಳಿಗೆ ಬೀಳುವುದನ್ನೂ ಲೆಕ್ಕಿಸದೆ ಓಡಿಬಂದರು. ಅವರು ಓಡಿ ಬಂದ ಚಿತ್ರ, ದೈವದಲ್ಲಿನ ಅವರ ಮಧುರ ಪ್ರೇಮ ಮನಕಲಕುವಂತಿದ್ದು, ಅಕ್ರೂರ ಚರಿತ್ರೆಯ ಆಕರ್ಷಕ ಚಿತ್ರಣಗಳಲ್ಲಿ ಒಂದಾಗಿದೆ. "ನಡೆವ ಭರದಿಂದೆಡಹಿ ಬೀಳುವರು, ಒಡೆದ ವದನವ ನೊತ್ತಿಕೊಳ್ವರು, ಪಿಡಿಯನಡುವಿನ ಜಡಿವ ಕುಚಗಳ ಬಳಲ ಮುಡಿವಿಡಿದು ಮಡದಿಯರು ತಮತಮಗೆ ಬರಿ ಮೊರೆಯಿಡುವ ಜೀವನವ ನಿಲಿಸುವಡರಿದೆನುತ ಗೋಪಿಯರು ಹರಿದರು ಕೃಷ್ಣನಿದ್ದೆಡೆಗೆ". ತಮ್ಮನ್ನು ಬಿಟ್ಟು ಹೊರಟ ಕೃಷ್ಣನನ್ನು ಕಂಡೊಡನೆ ಅವರ ಹೃದಯ ಗರಿಗೆದರಿ ಹಾರಾಡಿತು. ಒಬ್ಬೊಬ್ಬರಾಗಿ ಕೃಷ್ಣನ ಬಳಿಗೆ ಓಡಿದರು. ಈ ಚಿತ್ರಗಳಂತೂ ಅತ್ಯಂತ ಸುಂದರವಾಗಿವೆ. ಓಡಿಬಂದ ಒಬ್ಬಳ ಚಿತ್ರವಿದು – "ನೋಡಲಮ್ಮಳು ತೆರೆದು ನಯನವನಾಡಲಮ್ಮಳು ಮಾತುಗಳ ಸ್ವರವಾಡಲಮ್ಮಳು ಅಳಕ ನಿಚಯವ ನೀಡಲಮ್ಮಳು ಬೀಸಿ ತೋಳನು ಹೇಡಿ ಮನದಲಿ ಹೆದರಿ ನಿಂದಳು ಬಿಗಿದ ಬೆರಗಿನಲಿ". ಮತ್ತೊಬ್ಬಳ ಮೋಹಕ ಚಿತ್ರವನ್ನು ನೋಡಿ; "ತರಳೆಯೊಬ್ಬಳು ಬರಲು ಕಂಡರೆ ಪುರುಳ ಕೋಗಿಲೆ ತುಂಬಿಗಳು ಬಂದುರವಣಿಸಿ ಮೊರೆದಿರೆಗೆ ಕೋಪಿಸಿ, ನೂಕಿ ನಡೆತರಲು ಹರಣಹರಿ ಹಂಸೆಗಳು ಹರಿ ತಂದರೆ ಕಂಡಂಜಿದಳು ಕರೆದಳು ಹರಿಯೆ ಹರಿ ನಾನಾಹರಿಯೆ ನೋಡೆಂದು ತೋರಿದಳು'' ಹೀಗೆ ಒಬ್ಬೊಬ್ಬರೂ ಭರದಿಂದೋಡಿ ಬಂದು ಹರಿಯನ್ನು ಹಿಡಿದು, ಕೃಷ್ಣನೊಂದಿಗಿನ ತಮ್ಮ ಸಂಬಂಧಗಳನ್ನು ನೆನೆಸಿಕೊಳುತ್ತ ಬಿಡಲಾರದವರಾಗಿ, ಅಳಲುದುಂಬಿದ ಮನದಿಂದ ಕೃಷ್ಣನ ಪಾದದಲ್ಲಿ ಹೊರಳಿದರು. ಕೃಷ್ಣನ ಪ್ರೀತಿಯಿಂದ ತಮ್ಮನ್ನು ವಂಚಿಸಲು ಬಂದ ಅಕ್ರೂರವನ್ನು ಕ್ರೂರಿಯೆಂದು ದೂರಿದರು. ಪರಮಾತ್ಮ ಎಷ್ಟಾದರೂ ಭಕ್ತವತ್ಸಲ ತಾನೆ! ಗೋಪಿಯರ ಮನದ ತೊಳಲಾಟವನ್ನು ಕ್ಷಣಮಾತ್ರದಲ್ಲಿ ಅರಿತ. 'ನಿಲ್ಲಿ, ನೀವಂಜದಿರಿ' ಎನ್ನುತ್ತ ನೆರೆದಿದ್ದ ಪಂಕಜ ನೇತ್ರೆಯರನ್ನು ಪರಿಪರಿಯಾಗಿ ಸಮಾಧಾನಗೊಳಿಸಿ, ಕಂಬನಿತೊಡೆದು "ಬಿಲ್ಲ ಹಬ್ಬದ ಮರುದಿವಸ ಬಂದಲ್ಲದಿರೆ ನಿಮ್ಮಾಣೆ" ಎಂದು ನಂಬಿಸಿ ಹೊರಡಲನುವಾದ. ಆದರೆ ಗೋಪಿಯರು ಬಿಡಬೇಕಲ್ಲ, ಅವರಿಗೆ ಕೃಷ್ಣ ತಮ್ಮನ್ನು ಮರೆತು ಎಲ್ಲಿ ಕಂಸನಗರಿಯ ತರುಣಿಯರಿಗೊಲಿದು ಬಿಡುತ್ತಾನೊ, ಕೃಷ್ಣನ ಗುಣ ಸೌಂದರ್ಯವನ್ನು ಕಂಡ ಅಲ್ಲಿನ ತರುಣಿಯರು ಇವನನ್ನು ಬಿಡುವರೆ ಎಂಬ ಸಂಶಯ, ಭಯ-ಆದ್ದರಿಂದ ತಾವೂ ಬರುವುದಾ

(24ನೇ ಪುಟ ನೋಡಿ

# ಶ್ರೀಕ್ಷೇತ್ರ ಧರ್ಮಸ್ಥಳ

ಮಲೆನಾಡ ಸಿರಿಸೊಬಗಿನ ವನಶ್ರೀಯ ಮಡಿಲಲ್ಲಿ, ಬೆಟ್ಟ ಗುಡ್ಡಗಳಿಂದ ರಾರಾಜಿಸುವ, ತಣ್ಣನೆ ಹರಿಯುವ ನೇತ್ರಾವತಿ ಪರಿಸರದ ಪುಣ್ಯಕ್ಷೇತ್ರ "ಧರ್ಮಸ್ಥಳ". ಭಕ್ತ ಭಾವುಕರ ಮೈಮನ ಪುಳಕಿತಗೊಳಿಸುವ ಪವಿತ್ರ ಯಾತ್ರಾಕ್ಷೇತ್ರ. ದಕ್ಷಿಣ ಕನ್ನಡ ಜಿಲ್ಲಾಕೇಂದ್ರ, ಮಂಗಳೂರಿನಿಂದ 75 ಕಿ. ಮೀ. ದೂರದ ಧರ್ಮಸ್ಥಳಕ್ಕೆ ಬಂಟ್ವಾಳ, ಬೆಳ್ತಂಗಡಿಗಳಿಂದ ವಾಹನ ಸೌಕರ್ಯಗಳಿವೆ. ಬೆಂಗಳೂರಿನಿಂದ ಹಾಸನ ಇಲ್ಲವೇ ಚಿಕ್ಕಮಗಳೂರು ಮಾರ್ಗವಾಗಿ ಧರ್ಮಸ್ಥಳ ತಲುಪಬಹುದು.

ಅಲ್ಲಿಯ ಹಿಂದಿನ ಹೆಸರು "ಕುಡುಮ". ಎಂಟು ಶತಮಾನಗಳ ಪ್ರಾಚೀನ ಇತಿಹಾಸವಿರುವ ಕುಡುಮದಲ್ಲಿ ಬರ್ಮಣ್ಣ ಹೆಗ್ಗಡೆ ಸಾತ್ತ್ವಿಕ ದಂಪತಿಗಳಿಗೆ ಧರ್ಮದೇವತೆಗಳು ಮಾನವರೂಪದಲ್ಲಿ ಕಾಣಿಸಿಕೊಂಡು ಅವರಿತ್ತ ಆತಿಥ್ಯದಿಂದ ಸಂತೃಪ್ತರಾಗಿ ಆ ರಾತ್ರಿ ಅವರ ಕನಸಿನಲ್ಲಿ ಕಾಣಿಸಿಕೊಂಡು 'ತಾವು ಇಲ್ಲೇ ನೆಲೆ ನಿಲ್ಲುವುದಾಗಿಯೂ ಕ್ಷೇತ್ರದಲ್ಲಿ ದಾನಧರ್ಮ ಕಾರ್ಯಗಳು ನಿರಂತರವಾಗಿ ನಡೆಯಬೇಕೆಂತಲೂ' ಅಪ್ಪಣೆ ಕೊಟ್ಟು ಅಭಯ ನೀಡುತ್ತಾರೆ. ಧರ್ಮದೇವತೆಗಳ ಆದೇಶದಂತೆ ಬರ್ಮಣ್ಣ ಹೆಗ್ಗಡೆಯವರು ಕುಡುಮದಲ್ಲಿ ಕಾಳರಾಹು, ಕಾಳರ್ಕಾಯ್ಯ, ಕುಮಾರಸ್ವಾಮಿ ಹಾಗೂ ಕನ್ಯಾಕುಮಾರಿ ದೈವಗಳಿಗೆ ಗುಡಿಕಟ್ಟಿಸಿ ಕಾಲಕಾಲಕ್ಕೆ ನೇಮ ನಡಾವಳಿಗಳನ್ನು ನಡೆಸಿಕೊಂಡು ಬಂದ ಬಗ್ಗೆ ಸ್ಥಳಪುರಾಣದಲ್ಲಿ ಉಕ್ತವಾಗಿದೆ. ಧರ್ಮದೇವತೆಗಳ ದೂತನಾದ ಅಣ್ಣಪ್ಪಸ್ವಾಮಿ ಮುಂದೆ ಮಂಗಳೂರಿನ ಕದ್ರಿಯ ಶಿವಲಿಂಗವನ್ನು ತಂದಾಗ ಹೆಗ್ಗಡೆಯವರು ಮಂಜುನಾಥ ಸ್ವಾಮಿಗೆ ದೇವಾಲಯ ಕಟ್ಟಿಸಿ ಅಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಿದರು. ಅಂದಿನಿಂದ ಮಂಜುನಾಥಸ್ವಾಮಿ, ಚಂದ್ರನಾಥಸ್ವಾಮಿ ಹಾಗೂ ಧರ್ಮದೇವತೆಗಳು ಒಟ್ಟಾಗಿ ಪೂಜೆ ಕೈಗೊಂಡು ಉತ್ಸವ, ನಡಾವಳಿಗಳು ಆರಂಭಗೊಂಡವು. ಉಡುಪಿಯ ಸೋದೆ ವಾದಿರಾಜ ಯತಿಗಳು ಕುಡುಮದಲ್ಲಿ ಶಿವಲಿಂಗವನ್ನು ಪ್ರತಿಷ್ಠಾಪಿಸಲು ಕಾರಣರಾಗಿ, ಅಂದಿನಿಂದ ಧರ್ಮದ ನೆಲೆವೀಡಾದ ಕುಡುಮ "ಧರ್ಮಸ್ಥಳ"ವಾಯಿತು.

ಈ ಗ್ರಾಮ ದಟ್ಟಾರಣ್ಯವಾಗಿದ್ದ ಅಂದಿನ ಕುಡುಮ ಇಂದು ಆಧುನಿಕ ಕಟ್ಟಡ, ಭವ್ಯ ಪರಿಸರಗಳೊಂದಿಗೆ ಬೆಳೆಯುತ್ತಿರುವ ಧರ್ಮಸ್ಥಳ ನಗರ ನಂದನವನವೆನಿಸುತ್ತಿದೆ. ಹೊಸ ಹೊಸದಾಗಿ ರೂಪುಗೊಳ್ಳುತ್ತಿರುವ ವಸತಿಗೃಹಗಳು, ತಲೆ ಎತ್ತುತ್ತಿರುವ ಆಧುನಿಕ ಸೌಧಗಳು, ಬೆಳೆಗುತ್ತಿರುವ ವಿದ್ಯಾಕೇಂದ್ರಗಳು–ಒಂದು ಎರಡಲ್ಲ. ಧರ್ಮಸ್ಥಳದ ಪ್ರಗತಿ ಎಣಿಕೆಗೆ ನಿಲುಕದ್ದು, ಊಹೆಗೆ ಮೀರಿದ್ದು. ಹೆಗ್ಗಡೆಯವರ ಅನೇಕ ತಲೆಮಾರು ಸಂದು ಹೋದರೂ ಕ್ಷೇತ್ರದ ಕಟ್ಟುಪಾಡು, ದಾನಧರ್ಮಗಳಿಗೇನೂ ಕುಂದಿಲ್ಲ. ಕುಮಾರಯ್ಯ ಹೆಗ್ಗಡೆ, ಇಮ್ಮಡಿ ಮಂಜಯ್ಯ ಹೆಗ್ಗಡೆ, ಚಂದಯ್ಯ ಹೆಗ್ಗಡೆ, ಮಂಜಯ್ಯ ಹೆಗ್ಗಡೆ, ರತ್ನವರ್ಮ ಹೆಗ್ಗಡೆಯವರು ಧರ್ಮದೇವತೆಗಳ ಅಡಿಯಾಳಾಗಿ ಅವರ ಮಾತನ್ನು ಶಿರಸಾ ಪಾಲಿಸಿ ಕ್ಷೇತ್ರದ ಪ್ರಗತಿಗೆ ಕಾರಣೀಭೂತರಾಗಿದ್ದಾರೆ. ಹಿರಿಯರ ಅನುಜ್ಞೆಯ ಪರಿಪಾಲಕರಾಗಿ ಇಂದಿನ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರು ಅನೇಕ ಕ್ರಾಂತಿಕಾರೀ ಪ್ರಗತಿಕಾರ್ಯಗಳನ್ನು ಯಶಸ್ವಿಯಾಗಿ ಪೂರೈಸಿ "ಆಧುನಿಕ ಯುಗಪ್ರವರ್ತಕ"ರೆನಿಸಿದ್ದಾರೆ. 1968 ರಲ್ಲಿ ಅಧಿಕಾರಕ್ಕೆ ಬಂದ ಅವರು ಮೊತ್ತಮೊದಲಿಗೆ ತನ್ನ ತೀರ್ಥರೂಪ ಶ್ರೀ ರತ್ನವರ್ಮ ಹೆಗ್ಗಡೆಯವರು ಆರಂಭಿಸಿದ್ದ ಬಾಹುಬಲಿ ಕೆತ್ತನೆಯನ್ನು ಪೂರ್ಣಗೊಳಿಸಿ, ಅದನ್ನು ಕಾರ್ಕಳದಿಂದ ಧರ್ಮಸ್ಥಳಕ್ಕೆ ಅತ್ಯಂತ ಸಾಹಸದಿಂದ ಕೊಂಡೊಯ್ದು ಬೆಟ್ಟದ ಮೇಲೆ ಪ್ರತಿಷ್ಠಾಪಿಸಿ ಮಹಾಮಸ್ತಕಾಭಿಷೇಕ ನಡೆಸಿ ಕೃತಕೃತ್ಯರಾದರು. ಧರ್ಮಸ್ಥಳದ ಕಾರ್ಯಕ್ಷೇತ್ರ ಕೇವಲ ಧಾರ್ಮಿಕ ಕಾರ್ಯಗಳಿಗೆ ಮೀಸಲಾಗಿಲ್ಲ. ಶೈಕ್ಷಣಿಕ, ಸಾಮಾಜಿಕ ಹೊಣೆಗಾರಿಕೆಗಳಲ್ಲೂ ಕ್ಷೇತ್ರದ ಹಿರಿಮೆ ಎಂತ್ರದು. ವಸಂತ ಮಹಲಿನ ನವೀಕರಣ, ಭೋಜನಶಾಲೆಯ ವಿಸ್ತರಣೆ, ವಸತಿಗೃಹಗಳ ನಿರ್ಮಾಣ, ಧರ್ಮ ಸಮ್ಮೇಳನ, ಸಾಹಿತ್ಯ ಸಮ್ಮೇಳನ, ವಿದ್ಯಾಕೇಂದ್ರಗಳ ಆಸರೆ, ಯಾತ್ರಾರ್ಥಿಗಳಿಗೆ ಉಚಿತ ಭೋಜನ ಸುವ್ಯವಸ್ಥೆ–ಶ್ರೀಕ್ಷೇತ್ರ ಸಾಧಿಸಿದ, ಸಾಧಿಸುತ್ತಿರುವ ಪ್ರಗತಿ ಅಗಾಧವಾದುದು. ಶ್ರೀಕ್ಷೇತ್ರದ ಶೈಕ್ಷಣಿಕ ಟ್ರಸ್ಟ್ ಆಶ್ರಯದಲ್ಲಿ ಹತ್ತಾರು ಶಾಲಾಕಾಲೇಜುಗಳು ತಲೆ ಎತ್ತಿ ವಿದ್ಯಾದಾನ ನೀಡುತ್ತಿವೆ. ಉಚಿತ ವೈದ್ಯಕೀಯ ನೆರವು, ಸಂಚಾರಿ ಆಸ್ಪತ್ರೆ, ನೇತ್ರ ಚಿಕಿತ್ಸಾ ಶಿಬಿರ, ಗ್ರಾಮೀಣ ಅಭಿವೃದ್ಧಿ ಯೋಜನೆ, ಬಡಜನತೆಗೆ ನೆರವು – ಇತ್ಯಾದಿ ಯೋಜನೆಗಳು ಶ್ರೀ ವೀರೇಂದ್ರ ಹೆಗ್ಗಡೆಯವರ ಕಾರ್ಯಕ್ಷೇತ್ರ ವಿಸ್ತರಣೆಯ ದ್ಯೋತಕ.

1973 ರಲ್ಲಿ ಶ್ರೀಕ್ಷೇತ್ರದಲ್ಲಿ ಆರಂಭಗೊಂಡ ಉಚಿತ ಸಾಮೂಹಿಕ ವಿವಾಹಯೋಜನೆ ವರ್ಷಂಪ್ರತಿ ಫಲಪ್ರದವಾಗಿ ಸಾಗಿ ರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದು ಬಡ ಕುಟುಂಬಗಳ ಪಾಲಿಗೆ "ಕಲ್ಯಾಣಭಾಗ್ಯ"ವೆನಿಸಿದೆ. ದಿ|| ಮಂಜಯ್ಯ ಹೆಗ್ಗಡೆಯವರು ಆರಂಭಿಸಿದ್ದ ಸಿದ್ಧವನ ಗುರುಕುಲ ಆದರ್ಶ ಸೇವಾಕೇಂದ್ರವಾಗಿ ಬೆಳಗುತ್ತಿರುವ ಮಾದರಿಯಾಗಿದೆ. ಕ್ಷೇತ್ರ ಬೆಳೆದಂತೆ ಭಕ್ತರ ಪ್ರವಾಹವೂ ಮೇರೆ ಮೀರುತ್ತಿದೆ. ಅವರ ಅನುಕೂಲತೆಗೆ ವಸತಿಗೃಹಗಳ ಸಮಸ್ಯೆಯನ್ನು ನೀಗಿಸಲು ಅತ್ಯಾಧುನಿಕ ಛತ್ರಗಳು ರೂಪುಗೊಂಡಿವೆ, ಇನ್ನೂ ನಿರ್ಮಾಣಗೊಳ್ಳುತ್ತಿವೆ. ಭಕ್ತಾದಿಗಳಿಗೆ ಉಚಿತ ಊಟ, ವಸತಿ ಸೌಕರ್ಯ ಒದಗಿಸುವ ಯಾತ್ರಾಸ್ಥಳವೆಂದರೆ ಧರ್ಮಸ್ಥಳ ಮಾತ್ರ!

ಶ್ರೀ ಮಂಜುನಾಥ ಸ್ವಾಮಿಯ ಧರ್ಮ

ಶ್ರೀ ಶ್ರೀನಿವಾಸ ತಂತ್ರಿ

ದರ್ಶನ ಪಡೆಯಲು ಮುಂಜಾನೆ 7 ರಿಂದ 8 ಹಾಗೂ 11 ರಿಂದ 1 ಗಂಟೆಯ ತನಕ ಅವಕಾಶವಿದೆ. ಮಧ್ಯಾಹ್ನ 1 ಗಂಟೆ ಹಾಗೂ ರಾತ್ರಿ 8 ಗಂಟೆಗೆ ಮಹಾಪೂಜೆ ನಡೆಯುತ್ತದೆ. ಮಧ್ಯಾಹ್ನ ಮಹಾಪೂಜಾನಂತರ ಸಂಜೆ 6-30 ರ ವರೆಗೆ ದೇವರ ದರ್ಶನ ಲಭಿಸುವುದಿಲ್ಲ. ಗುಡಿಯೊಳಗೆ ಪ್ರವೇಶಿಸುವ ಗಂಡಸರು ಅಂಗಿ, ಬನಿಯನು ತೆಗೆದು ಪ್ರವೇಶಿಸಬೇಕೆಂಬ ನಿಯಮವಿದೆ. ಮಂಜುನಾಥ ಸ್ವಾಮಿಗೆ ಶತರುದ್ರಾಭಿಷೇಕ, ಪಾರಾಯಣ ಪಂಚಾಮೃತಾಭಿಷೇಕ, ಸಹಸ್ರನಾಮ ಬಿಲ್ವಾರ್ಚನೆ, ಮಹಾಪೂಜೆ ಸೇವೆಗಳು ನಡೆಸಲ್ಪಡುತ್ತವೆ. ಶ್ರೀ ಅಮ್ಮನವರ ಸನ್ನಿಧಿಯಲ್ಲಿ ಪವಮಾನ, ಪಂಚಾಮೃತ ಅಭಿಷೇಕ, ಲಲಿತಾ ಸಹಸ್ರನಾಮಾರ್ಚನೆ, ದೇವಿ ಮಹಾತ್ಮೆ ಪಾರಾಯಣ, ಮಹಾಪೂಜೆ ನಡೆಯುವುವು. ಶ್ರೀ ಗಣಪತಿ ಸನ್ನಿಧಿಯಲ್ಲಿ ಪಂಚಾಮೃತಾಭಿಷೇಕ, ಮಹಾಪೂಜೆ, ಪಂಚಕಜ್ಜಾಯ ಸೇವೆಗಳು ನಡೆಯುತ್ತವೆ. ಚಂದ್ರನಾಥಸ್ವಾಮಿ ಬಸದಿಯಲ್ಲಿ ಪಂಚಾಮೃತ-ಕ್ಷೀರಾಭಿಷೇಕ, ಮಹಾಪೂಜೆ ನಡೆಯುತ್ತವೆ.

"ತಿರುಪತಿ ತಿಮ್ಮಪ್ಪ ಕಾಸುಬಿಡ, ಧರ್ಮಸ್ಥಳ ಮಂಜುನಾಥ ಮಾತು ಬಿಡ" ನಾಣ್ಣುಡಿ ದಕ್ಷಿಣ ಭಾರತೀಯರಲ್ಲಿ ಮನೆ ಮಾತಾಗಿದೆ. ಕುಟುಂಬದ ಮಾತು, ತೀರ್ಮಾನ, ಹುಯಿಲು, ಸಲ್ಲಿಸುವ ಪದ್ಧತಿ ಕ್ಷೇತ್ರದಲ್ಲುಂಟು. ಕುಟುಂಬದ ಒಳಜಗಳ, ವೈಷಮ್ಯಗಳಿಗೆ ಸನ್ನಿಧಿಯಲ್ಲಿ ಪ್ರಾಯಶ್ಚಿತ್ತ ರೂಪದ ಪರಿಹಾರ ಲಭಿಸುವುದು ಪುಣ್ಯ ವಿಶೇಷ. ಶ್ರೀ ಹೆಗ್ಗಡೆಯವರು ಸ್ವಾಮಿಯೆದುರು ನಿಂತು ಅಭಯ ನೀಡಿದರೆಂದರೆ ಅದು ದೇವ ವಾಕ್ಯ. ಭಕ್ತರು ಹರಕೆ, ಕಾಣಿಕೆಗಳನ್ನು ಮಂಜುನಾಥ ಸ್ವಾಮಿಯೆದುರಿನ ಹುಂಡಿಯಲ್ಲಿ ಮಾತ್ರ ಹಾಕ ಬಹುದಾಗಿದೆ. ಇಲ್ಲವೇ ಮನಿಯಾರ್ಡರ್ ಮೂಲಕ ಕಾಣಿಕೆಗಳನ್ನು ಕ್ಷೇತ್ರಕ್ಕೆ ಸಂದಾಯಗೊಳಿಸ ಬಹುದಾಗಿದೆ. ದೇವಸ್ಥಾನದ ವತಿಯ ಅಂಗಡಿಯಿಂದಲೇ ಹಣ್ಣುಕಾಯಿ ಖರೀದಿಸಿ ಸ್ವಾಮಿಗೆ ಸಮರ್ಪಿಸಲು ಅವಕಾಶವಿದೆ. ಮದ್ಯಾಹ್ನ 12 ಗಂಟೆ ಹಾಗೂ ರಾತ್ರಿ ಏಳೂವರೆ ನಂತರ ಊಟದ ವ್ಯವಸ್ಥೆ ಆರಂಭಗೊಳ್ಳುತ್ತದೆ. ಒಬ್ಬರಿಗೆ ಎಲ್ಲರನ್ನು "ಊಟಕ್ಕೆ ಬನ್ನಿ" ಎಂದು ಕೂಗಿ ಕರೆಯುವುದೇ ಉದ್ಯೋಗ,

ಅಣ್ಣಪ್ಪಸ್ವಾಮಿ ಬೆಟ್ಟ ಹಾಗೂ ನೆಲ್ಯಾಡಿ ಬೀಡಿಗೆ ಹೆಂಗಸು, ಮಕ್ಕಳು ಹೋಗಬಾರದೆನ್ನುವುದು ಸಂಪ್ರದಾಯ. ಪರಸ್ಥಳದ ಯಾತ್ರಾರ್ಥಿಗಳು ನೇತ್ರಾವತಿಯಲ್ಲಿ ಮಿಂದು ಪುನೀತರಾಗಿ ಮಂಜುನಾಥನ ದರ್ಶನ ಪಡೆಯುವುದು ವಾಡಿಕೆ.

ಶ್ರೀ ಕ್ಷೇತ್ರದಲ್ಲಿ ಗಣೇಶ ಚತುರ್ಥಿ, ನವರಾತ್ರಿ, ದೀಪಾವಳಿ, ಕಾರ್ತಿಕ ಅಮಾವಾಸ್ಯೆ, ಶಿವರಾತ್ರಿ, ಪತ್ತನಾಜೆ ಹಾಗೂ ವಿಶೇಷ ದಿನಗಳಂದು ಕ್ಷೇತ್ರದಲ್ಲಿ ಸಂಭ್ರಮದ ಉತ್ಸವ. ಕಾರ್ತಿಕ ಅಮಾವಾಸ್ಯೆಯ ಲಕ್ಷದೀಪೋತ್ಸವಕ್ಕೆ ಲಕ್ಷಾಂತರ ಯಾತ್ರಿಕರ ಸಮ್ಮಿಲನ, ವರ್ಷಕ್ಕೆರಡು ಬಾರಿ ಸ್ತ್ರೀಯರಿಗೆ ಸಹಸ್ರಾರು ಸಂಖ್ಯೆಯಲ್ಲಿ ಸೀರೆದಾನ, ತೈಲದಾನ ನಡೆಯುತ್ತದೆ. ಶ್ರೀಕ್ಷೇತ್ರ ವಸ್ತ್ರದಾನ, ಅನ್ನದಾನ, ವಿದ್ಯಾದಾನ, ಅಭಯದಾನಗಳಿಗೆ ಹೆಸರಾದುದು. ಧರ್ಮಸ್ಥಳ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ರಂಗಗಳ ಸಂಗಮ. ಹಿಂದೂಗಳು ಮಾತ್ರವಲ್ಲದೆ ಕ್ರೈಸ್ತ ಮುಸಲ್ಮಾನರೂ ಕ್ಷೇತ್ರದ ಮಹಿಮೆಗೆ ತಲೆಬಾಗಿ ನಮಿಸುವುದು ಗಮನಾರ್ಹ. ಕ್ಷೇತ್ರದ ಮೇಲ್ವಿಚಾರಣೆಯಲ್ಲಿ ಪ್ರತಿಯೊಂದು ವಿಭಾಗಗಳಲ್ಲೂ ಶಿಸ್ತು, ಅಚ್ಚುಕಟ್ಟಾದ ನಿಯಮ.

ತೀರ್ಥಸ್ನಾನ, ಮುಡಿ ಒಪ್ಪಿಸುವುದು, ಆಣೆ-ಭಾಷೆ ಪರಿಹಾರ, ತುಲಾಭಾರ ಹರಕೆಗಳು ಕ್ಷೇತ್ರದ ಮಹತ್ವದ ಸಂಪ್ರದಾಯಗಳು.

ಶ್ರೀಕ್ಷೇತ್ರದ "ಎಡ್ಯುಕೇಶನಲ್ ಟ್ರಸ್ಟ್" ಉಜಿರೆ, ಮಂಗಳೂರು, ಉಡುಪಿ, ಧಾರವಾಡಗಳಲ್ಲಿ ಕಾಲೇಜುಗಳನ್ನು ನಡೆಸುತ್ತಿದೆ. "ವೈದ್ಯಕೀಯ ಟ್ರಸ್ಟ್" ಮಂಗನಕಾಯಿಲೆಯ ನಿವಾರಣೆಗೆ ನೆರವು ನೀಡುತ್ತ ಸಂಚಾರಿ ಆಸ್ಪತ್ರೆಗಳನ್ನು ನಡೆಸುತ್ತಿದೆ.

1982 ಫೆಬ್ರವರಿ 3 ರಂದು ರಂಜಾಳ ಗೋಪಾಲ ಶೆಣೈಯವರಿಂದ ರೂಪುಗೊಂಡ 39 ಅಡಿ ಎತ್ತರ 170 ಟನ್ ಭಾರದ ಏಕಶಿಲಾ ಬಾಹುಬಲಿ ವಿಗ್ರಹ ಧರ್ಮಸ್ಥಳದಲ್ಲಿ ಪ್ರತಿಷ್ಠಾಪನೆಗೊಂಡು ಮಹಾಮಸ್ತಕಾಭಿಷೇಕ ನೆರವೇರಿತು.

ಶ್ರೀಕ್ಷೇತ್ರದ ವತಿಯ ಯಕ್ಷಗಾನ ಮಂಡಳಿ ಯಕ್ಷಗಾನ ಕಲಾಪರಂಪರೆಯನ್ನು ನಾಡಿನೆಲ್ಲೆಡೆ ಪಸರಿಸುವ ಮಹೋದ್ದೇಶಹೊಂದಿ ಮುನ್ನಡೆಯುತ್ತಿದೆ. ಕ್ಷೇತ್ರದ ಬಗ್ಗೆ ಸಚಿತ್ರ ಮಾಹಿತಿ ನೀಡುವ "ಮಂಜುವಾಣಿ" ಧಾರ್ಮಿಕ ಮಾಸಪತ್ರಿಕೆ ದಾರ್ಶನಿಕರಿಗೊಂದು ಅಪೂರ್ವ ಕೈಪಿಡಿ. ವಸಂತ ಮಹಲ್, ಲಲಿತೋದ್ಯಾನ, ಗ್ಲಾಸ್‌ಹೌಸ್ ವಸ್ತುಸಂಗ್ರಹಾಲಯ ಶ್ರೀಕ್ಷೇತ್ರದ ಇತರ ಪ್ರೇಕ್ಷಣೀಯ ಸ್ಥಳಗಳು.

ಇದೇ ನವೆಂಬರ್ 22 ರಂದು ಕ್ಷೇತ್ರದಲ್ಲಿ ಸಂಭ್ರಮದ ಲಕ್ಷದೀಪೋತ್ಸವ ನಡೆಯಲಿದೆ. (ಆಧಾರ.)



## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. —ತಿ. ತಿ. ದೇ.

## ಗೃಹಲಕ್ಷ್ಮಿ

# ಸರಸ್ವತೀದೇವಿ



ಆದಿಶಕ್ತಿಯು ಸಮಸ್ತ ವಿಶ್ವಕ್ಕೆ ಕಾರಣಭೂತಳು; ಈ ಪರಮೇಶ್ವರಿಯು ಮೂರು ರೂಪಗಳಲ್ಲಿ ಅಭಿವ್ಯಕ್ತಗೊಳ್ಳುತ್ತಾಳೆ. ಮಹಾಕಾಳೀ, ಮಹಾಲಕ್ಷ್ಮೀ ಮತ್ತು ಮಹಾ ಸರಸ್ವತಿ—ಎಂಬುದೇ ಆ ಮೂರು ರೂಪಗಳು. ಇವುಗಳ ಮೂಲ ಪ್ರಕೃತಿಯು ಮಹಾ ಲಕ್ಷ್ಮಿಯೇ ಆಗಿರುವಳು.

ಈಕೆಯು ಚಂದ್ರನ ಕಿರಣಗಳಂತೆ ಗೌರವರ್ಣ ಉಳ್ಳವಳು. ಈಕೆಯ ಕೈಗಳಲ್ಲಿ ಅಕ್ಷ ಮಾಲೆ, ಅಂಕುಶ, ವೀಣಾ ಹಾಗೂ ಪುಸ್ತಕಗಳು ಇರುತ್ತವೆ. ಈಕೆಗೆ ಮಹಾವಿದ್ಯಾ, ಮಹಾವಾಣೀ, ಭಾರತೀ, ವಾಕ್, ಸರಸ್ವತೀ, ಆರ್ಯಾ, ಬ್ರಾಹ್ಮೀ, ಕಾಮಧೇನು, ವೇದಗರ್ಭಾ ಮತ್ತು ಧೀಶ್ವರೀ – ಎಂಬ ಹೆಸರುಗಳೂ ಉಂಟು. ಈಕೆಯನ್ನು ವಾಣಿ ಮತ್ತು ವಿದ್ಯೆಗಳ ಅಧಿಷ್ಠಾತ್ರಿ ದೇವಿ ಎಂಬುದಾಗಿಯೂ ಕರೆಯುತ್ತಾರೆ. ಋಗ್ವೇದದಲ್ಲಿ ವಾಗ್ದೇವಿಯ ಹೆಸರನ್ನು ಸರಸ್ವತೀ ಎಂದು ತಿಳಿಸಲಾಗಿದೆ.

ಸ್ವರ್ಗ, ಭೂಮಿ ಮತ್ತು ಅಂತರಿಕ್ಷಗಳು ಈಕೆಯ ಮೂರು ಸ್ಥಾನಗಳು. ಸ್ವರ್ಗದಲ್ಲಿ ವಾಗ್ದೇವಿಯ ಹೆಸರು ಭಾರತೀ ಎಂದಾಗಿದೆ, ಭೂಮಿಯಲ್ಲಿ ಇಳಾ ಮತ್ತು ಅಂತರಿಕ್ಷದಲ್ಲಿ ಸರಸ್ವತಿ ಎಂದಾಗಿದೆ. ತಂತ್ರ ಶಾಸ್ತ್ರದಲ್ಲಿ ಸುಪ್ರಸಿದ್ಧ ತಾರಾದೇವಿಯ ಹೆಸರೂ ಕೂಡ ಸರಸ್ವತಿ ಎಂದೇ ಆಗಿದೆ. ತಂತ್ರೋಕ್ತ ನೀಲ ಸರಸ್ವತಿಯ ಪೀಠಶಕ್ತಿಗಳಲ್ಲಿ ಕೂಡ ಸರಸ್ವತಿಯ ಹೆಸರು ಬಂದಿದೆ. ತಾರಿಣೀ ದೇವಿಯ ಒಂದು ಮೂರ್ತಿಯ ಹೆಸರೂ ಕೂಡ ಸರಸ್ವತಿ ಎಂದೇ ಇದೆ.

ಸರಸ್ವತಿಯು ಸಂಶಯಗಳನ್ನು ದೂರಮಾಡುವ ಬುದ್ಧಿ ಸ್ವರೂಪಿಣಿಯಾಗಿರುತ್ತಾಳೆ. ಈಕೆಯ ಉಪಾಸನೆ ಮಾಡುವುದರಿಂದ ಎಲ್ಲ ರೀತಿಯ ಸಿದ್ಧಿಗಳೂ ಉಂಟಾಗುತ್ತದೆ ಎಂಬ ನಂಬಿಕೆ ಇದೆ. ಈಕೆಯು ಸಂಗೀತದ ಅಧಿಷ್ಠಾತ್ರಿಯಾಗಿರುವಳು. ಸ್ವರ, ತಾಳ, ಲಯ, ರಾಗ – ರಾಗಿಣಿಯರ ಪ್ರಾದುರ್ಭಾವವು ಈಕೆಯಿಂದಲೇ ಆದವು. ಸಪ್ತ ಸ್ವರಗಳ ಮುಖಾಂತರ ಈಕೆಯನ್ನು ಸ್ಮರಿಸಲಾಗುವುದು. ಆದುದರಿಂದಲೇ ಈಕೆಯನ್ನು 'ಸ್ವರಾತ್ಮಿಕಾ' ಎಂದು ಕರೆಯಲಾಗುವುದು. ಈಕೆಯು ಸಪ್ತವಿಧ ಸ್ವರಗಳ ಜ್ಞಾನವನ್ನು ನೀಡಬಲ್ಲವಳಾದುದರಿಂದಲೇ ಈಕೆಯ ಹೆಸರು 'ಸರಸ್ವತೀ' ಎಂದಾಗಿರುವುದು.

ಸರಸ್ವತಿಯ ಬಗೆಗೆ 'ದೇವಿ ಭಾಗವತ'ದಲ್ಲಿ ಉಲ್ಲೇಖಗಳಿವೆ. ಈಕೆಯು ಕೃಷ್ಣ ಪರಮಾತ್ಮನ ಜಿಹ್ವೆಯ ಅಗ್ರಭಾಗದಲ್ಲಿ ಪ್ರಪ್ರಥಮವಾಗಿ ಪ್ರಕಟಗೊಂಡಳು. ಕೃಷ್ಣನು ಈಕೆಯನ್ನು ಭಗವಾನ್ ನಾರಾಯಣನಿಗೆ ಅರ್ಪಿಸಿದನು. ಕೃಷ್ಣನೇ ಪ್ರಪಂಚದಲ್ಲಿ ಮೊಟ್ಟಮೊದಲನೆಯದಾಗಿ 'ಸರಸ್ವತೀಪೂಜೆ'ಯನ್ನು ಪ್ರಾರಂಭಿಸಿದನು—ಎಂದು ನಂಬಲಾಗಿದೆ. ಇದಕ್ಕೆ ತಕ್ಕಂತೆ ಒಂದು ಕತೆಯೂ ಇದೆ.

ಒಮ್ಮೆ ಬ್ರಹ್ಮನು ಯೋಚಿಸಿದನು—ಎಲ್ಲ ದೇವತೆಗಳಿಗೂ ಭೂಮಿಯ ಮೇಲೆ ತೀರ್ಥ-ಕ್ಷೇತ್ರಗಳಿವೆ ; ಆದರೆ ತನ್ನ ಹೆಸರಿನಲ್ಲಿ ಒಂದಾದರೂ ತೀರ್ಥ ಕ್ಷೇತ್ರವಿಲ್ಲವಲ್ಲ !

ಹೀಗೆಂದು ಯೋಚಿಸಿದ ಬ್ರಹ್ಮನು ತನ್ನ ಹೆಸರಿನಲ್ಲಿ ಒಂದು ತೀರ್ಥವನ್ನು ಸ್ಥಾಪಿಸಲು ನಿರ್ಧರಿಸಿದನು. ಈ ಉದ್ದೇಶಕ್ಕಾಗಿ ರತ್ನಮಯ ಶಿಲೆಯೊಂದನ್ನು ಭೂಮಿಯ ಮೇಲೆ ಹಾಕಿದನು. ಇದು ಚಮತ್ಕಾರಪುರದ ಬಳಿ ಬಿದ್ದಿತು. ಇದರಿಂದ ಅಲ್ಲಿಯೇ ತನ್ನ ತೀರ್ಥಕ್ಷೇತ್ರವನ್ನು ಸ್ಥಾಪಿಸಿದ. ವಿಷ್ಣುವಿನ ನಾಭಿಯಿಂದ ಜನಿಸಿದ ಕಮಲದಲ್ಲಿ ಹುಟ್ಟಿದ ಬ್ರಹ್ಮನ ಸ್ಥಾನಕ್ಕೆ ಸಮಾನವಾದುದು ಈ ಸ್ಥಳ ಎಂದು ಪ್ರಸಿದ್ಧ ಪಡೆಯಿತು. ಇದೇ ಪುಷ್ಕರ ತೀರ್ಥವೆಂದು ನಂತರ ಪ್ರಖ್ಯಾತಿ ಪಡೆಯಿತು. ಪುರಾಣಗಳಲ್ಲಿ ಈ ಕ್ಷೇತ್ರದ ವರ್ಣನೆಯನ್ನು ನೀಡಲಾಗಿದೆ. ಈಗಿನ ರಾಜಾಸ್ಥಾನದ ಅಜ್ಮೀರ್‌ನಿಂದ ಆರು ಮೈಲಿಗಳ ದೂರದಲ್ಲಿ ಈ ಕ್ಷೇತ್ರವಿದೆ.

ತೀರ್ಥವನ್ನು ಸ್ಥಾಪನೆ ಮಾಡಿದ ನಂತರ ಪವಿತ್ರ ಜಲದಿಂದ ಕೂಡಿದ ಒಂದು ಸರೋವರವನ್ನು ನಿರ್ಮಿಸಲು ಆತನು ನಿಶ್ಚಯಿಸಿದನು. ಇದಕ್ಕಾಗಿ ಆತನು ಸರಸ್ವತೀ ನದಿಯನ್ನು ಸ್ಮರಿಸಿದನು. ಸರಸ್ವತಿಯು ನದಿ ರೂಪದಲ್ಲಿದ್ದರೂ ಪಾಪಿಷ್ಟರ ಭಯದಿಂದ ಗುಪ್ತವಾಗಿ ಪಾತಾಳದಲ್ಲಿ ಹರಿಯುತ್ತಿದ್ದಳು. ಬ್ರಹ್ಮನು ಸ್ಮರಿಸಿದ್ದರಿಂದ ಭೂತಲ ಹಾಗೂ ಹಿಂದೆ ತಿಳಿಸಿದ, ರತ್ನಮಯ ಶಿಲೆಯನ್ನು ಭೇದಿಸಿಕೊಂಡು ಪ್ರತ್ಯಕ್ಷಳಾದಳು. ಆಕೆಯನ್ನು ನೋಡಿ ಬ್ರಹ್ಮನು ಹೇಳಿದನು :

"ನೀನು ಸದಾ ಕಾಲದಲ್ಲಿಯೂ ಇಲ್ಲಿ ನನ್ನ ಸಮೀಪದಲ್ಲೇ ಇರು."

ಬ್ರಹ್ಮನ ಈ ಆದೇಶವನ್ನು ಆಲಿಸಿ ಸರಸ್ವತಿಯು ತುಂಬಾ ಭಯಗೊಂಡಳು, ಕೈ ಮುಗಿದು ಹೇಳಿದಳು :

"ಭಗವನ್ ! ನಾನು ಈ ಜನರ ಭಯದಿಂದ ದೂರದ ಪಾತಾಳದಲ್ಲಿ ಇದ್ದೇನೆ. ಯಾವಾಗಲೂ ಹೊರಗೆ ಬರಲು ಇಷ್ಟಪಡುವುದಿಲ್ಲ.



ರಘುಸುತ

ಆದರೆ ನಿಮ್ಮ ಆಜ್ಞೆಯನ್ನು ಉಲ್ಲಂಘಿಸಲಾರದೆ ಭೂಮಿಯ ಮೇಲೆ ಬಂದೆ. ಆದುದರಿಂದ ಈ ವಿಷಯದ ಬಗ್ಗೆ ತಾವು ಚೆನ್ನಾಗಿ ಯೋಚಿಸಿ, ಸೂಕ್ತ ವ್ಯವಸ್ಥೆಯನ್ನು ಮಾಡಿ."

ಆಗ ಬ್ರಹ್ಮನು ಸರಸ್ವತಿಯ ನಿವಾಸಕ್ಕಾಗಿ ಒಂದು ವಿಶಾಲಕೊಳವನ್ನು ಅಗೆಯಿಸಿ, ನಿರ್ಮಿಸಿದ. ಸರಸ್ವತಿಯು ಅದೇ ಸರೋವರದಲ್ಲಿ ಆಶ್ರಯ ಪಡೆದಳು.

ನಂತರ ಬ್ರಹ್ಮನು ಬೃಹದಾಕಾರದ, ಭಯಾನಕ ಸರ್ಪಗಳನ್ನು ಕರೆದು ಆಜ್ಞಾಪಿಸಿದನು.

"ನೀವುಗಳು ಎಚ್ಚರಿಕೆಯಿಂದ ಎಲ್ಲ ಕಡೆಯಿಂದಲೂ ಈ ಸರೋವರವನ್ನು ರಕ್ಷಿಸಿ. ಯಾರೂ ಈ ಸರೋವರದ ನೀರನ್ನು ಸ್ಪರ್ಶಿಸದಿರಲಿ."

ಒಮ್ಮೆ ವಿಷ್ಣುವು ಸರಸ್ವತಿಗೆ ಹೀಗೆಂದು ಆಜ್ಞಾಪಿಸಿದನು,

"ನೀನು ಬಡಬಾನಲವನ್ನು ನಿನ್ನ ಪ್ರವಾಹದೊಂದಿಗೆ ಒಯ್ದು ಸಮುದ್ರದಲ್ಲಿ ಬಿಸಾಡು !"

ಈ ಕಾರ್ಯಕ್ಕಾಗಿ ಆಕೆಯು ಬ್ರಹ್ಮನ ಅನುಮತಿಯನ್ನು ಪಡೆಯಬೇಕಾಯಿತು. ಇದು ಲೋಕಹಿತ ಕಾರ್ಯವೆಂದೆಣಿಸಿ, ಬ್ರಹ್ಮನೂ ಈ ಕಾರ್ಯಕ್ಕೆ ಸಮ್ಮತಿ ನೀಡಿದನು.

ಆಗ ಸರಸ್ವತಿಯು ಹೇಳಿದಳು.

"ಭಗವನ್! ನಾನು ಭೂಮಿಯ ಮೇಲೆ ಕಾಣಿಸಿಕೊಂಡಿದ್ದೇ ಆದರೆ ನನ್ನನ್ನು ಪಾಪಿಷ್ಟರು ಸಂಪರ್ಕಿಸುವರು. ಅದೇ ಭಯ ನನಗೆ. ಆದರೆ ಈ ಅಗ್ನಿಯನ್ನು ಪಾತಾಳಕ್ಕೆ ಕೊಂಡೊಯ್ದಿದ್ದೆ ಆದರೆ ನನ್ನ ಶರೀರವೆಲ್ಲ ಸುಟ್ಟು ಹೋಗುವುದು. ಅದೇ ಭಯ ನನಗೆ... ನಾನೇನು ಮಾಡಲಿ... ?"

ಆಗ ಬ್ರಹ್ಮನು ಆಕೆಯನ್ನು ಸಮಾಧಾನಗೊಳಿಸುತ್ತಾ ಹೀಗೆಂದು ಆಜ್ಞಾಪಿಸಿದನು :

"ನೀನು ಪಾಪಿಗಳ ಸಂಪರ್ಕದಿಂದ ದೂರವಿರಬೇಕೆಂದುಕೊಂಡರೆ, ಪಾತಾಳದಲ್ಲೆ ಪ್ರವಹಿಸುತ್ತಿರು. ಭೂಮಿಯ ಮೇಲೆ ಬರಬೇಡ. ಬಡಬಾನಲವನ್ನು ಜೊತೆಗೆ ತೆಗೆದುಕೊಂಡು ಹೋಗು. ಎಲ್ಲಿ ಆ ಅಗ್ನಿಯ ತಾಪವನ್ನು ಸಹಿಸಲು ಸಾಧ್ಯವಾಗುವುದಿಲ್ಲವೊ ಅಲ್ಲಿ ಭೂಮಿಯಿಂದ ಹೊರಗೆ ಬಂದು ನದೀರೂಪದಲ್ಲಿ ಪ್ರಕಟವಾಗು. ಇದರಿಂದ ನಿನ್ನ ಶರೀರದ ಮೇಲಿನ ತಾಪದ ಪ್ರಭಾವವು ಕಡಿಮೆಯಾಗುವುದು... ಆದರಿಂದ ನಿನಗೆ ಹೇಗೆ ಒಳ್ಳೆಯದೊ ಹಾಗೆ ಮಾಡು..."

ಬ್ರಹ್ಮನಿಂದ ಈ ರೀತಿಯ ಆಜ್ಞೆ ಪಡೆದ ಸರಸ್ವತಿಯು ತನ್ನ ಸಖಿಯರಾದ ಗಾಯತ್ರೀ, ಸಾವಿತ್ರೀ, ಯಮುನೆಯರೊಡಗೂಡಿ,ಹಿಮಾಲಯ ಪರ್ವತದ ಮೇಲೆ ಹೋದಳು. ಅಲ್ಲಿಂದ ನದೀ ರೂಪವನ್ನು ಧರಿಸಿ ಭೂಮಿಯ ಮೇಲೆ ಪ್ರವಹಿಸತೊಡಗಿದಳು. ಆ ಜಲರಾಶಿಯಲ್ಲಿ ಅನೇಕ ಜಲಜಂತುಗಳು ಕಾಣಿಸಿಕೊಂಡವು.

ಬಡಬಾನಲವನ್ನು ಧರಿಸಿ, ಆಕೆಯು ಸಾಗರದ ಕಡೆಗೆ ನಡೆದಳು. ಮೊದಲು ಭೂಮಿಯನ್ನು ಬೇಧಿಸಿಕೊಂಡು ಪಾತಾಳಮಾರ್ಗದಲ್ಲಿ ಪ್ರಯಾಣ ಮಾಡತೊಡಗಿದಳು. ಅಗ್ನಿಯ ತಾಪ ಹೆಚ್ಚಾದಾಗ ಭೂಮಿಯ ಮೇಲೆ ಬಂದು, ತಂಪಾಗುತ್ತಿದ್ದಳು.

ಹೀಗೆ ಮುಂದುವರೆಯುತ್ತಾ ಪ್ರಭಾಸ ಕ್ಷೇತ್ರವನ್ನು ತಲುಪಿದಳು. ಅಲ್ಲಿ ನಾಲ್ವರು ಮುನಿಗಳು ಕಠೋರ ತಪಸ್ಸನ್ನು ಆಚರಿಸುತ್ತಿದ್ದರು. ಇವರು ನಾಲ್ವರೂ ಸರಸ್ವತಿಯನ್ನು ಬೇರೆಬೇರೆಯಾಗಿಯೆ ತಮ್ಮ ಆಶ್ರಮಗಳ ಬಳಿ ಕರೆದರು. ಇದೇ ಸಮಯದಲ್ಲಿ ಸಮುದ್ರರಾಜನು ಪ್ರತ್ಯಕ್ಷನಾಗಿ ನದಿಯನ್ನು ಆವಾಹನೆಗೊಳ್ಳಲು ಸಿದ್ಧನಾದನು.

ಈಗ ಸರಸ್ವತಿಯು ಸಂದಿಗ್ಧದಲ್ಲಿ ಬಿದ್ದಳು. ಸಮುದ್ರರಾಜನನ್ನಂತೂ ಸೇರಲೇಬೇಕು. ಅದೇ ತನ್ನ ಗುರಿ. ಆದರೆ ಋಷಿಗಳ ಆಹ್ವಾನವನ್ನು ತಿರಸ್ಕರಿಸುವುದು ಹೇಗೆ? ಅವರಿಂದ ಶಾಪಕ್ಕೆ ಒಳಗಾಗುವ ಭಯವಿತ್ತು. ಆದುದರಿಂದ ಐದು ಧಾರೆಗಳಾಗಿ ಆಕೆ ಬದಲಾವಣೆ ಹೊಂದಿದಳು. ಒಂದು ನೇರವಾಗಿ ಸಮುದ್ರದ ಕಡೆ ಹೊರಟಿತು. ಉಳಿದ ನಾಲ್ಕು ವಿಭಾಗಗಳು ನಾಲ್ವರು ಋಷಿಗಳ ಆಶ್ರಮಗಳ ಬಳಿ ತೆರಳಿ ಅವರುಗಳಿಗೆ ಸಹಾಯಕವಾದವು. ಈ ರೀತಿಯಲ್ಲಿ 'ಪಂಚಸ್ರೋತ' ಎಂದು ಸರಸ್ವತಿಯು ಪ್ರಸಿದ್ಧಿ ಪಡೆದಳು. ಈ ತರಹ ದಾರಿಯಲ್ಲಿನ ವಿಘ್ನಗಳನ್ನು ಎದುರಿಸಿ, ಸರಸ್ವತಿಯು ನದೀರೂಪದಲ್ಲಿ ಸಾಗರವನ್ನು ಸೇರಿದಳು.

ಒಮ್ಮೆ ಬ್ರಹ್ಮನು ಸರಸ್ವತಿಗೆ ಹೇಳಿದನು :

"ನೀನು ಯಾರಾದರೂ ಯೋಗ್ಯ ವ್ಯಕ್ತಿಯ ನಾಲಿಗೆಯ ಮೇಲೆ ಕವಿತಾಶಕ್ತಿಯಾಗಿ ನೆಲಸು !"

ಬ್ರಹ್ಮನ ಈ ಆಜ್ಞೆಯನ್ನು ಶಿರಸಾವಹಿಸಿ, ಯೋಗ್ಯವ್ಯಕ್ತಿಗಾಗಿ ಹುಡುಕಲು ಹೊರಟಳು. ಮೇಲಿನ ಭುವರ್ಲೋಕ ಇತ್ಯಾದಿ ಏಳು ಲೋಕಗಳಲ್ಲಿ ಸುತ್ತಾಡಿದಳು. ದೇವತೆಗಳನ್ನೆಲ್ಲ ಪರೀಕ್ಷೆ ನಡೆಸಿದಳು. ಊಹುಂ, ಪ್ರಯೋಜನವಾಗಲಿಲ್ಲ. ಕೆಳಗಡೆ ಅತಲ,ವಿತಲ, ಸುತಲ ಇತ್ಯಾದಿ ಏಳು ಪಾತಾಳಗಳಲ್ಲಿಯೂ ಸುತ್ತಾಡಿ ಹುಡುಕಾಡಿದಳು. ಎಲ್ಲಿಯೂ ಆಕೆಗೆ ಯೋಗ್ಯ ವ್ಯಕ್ತಿ ಕಾಣಿಸಲಿಲ್ಲ.

ಇದೇ ಅನುಸಂಧಾನದಲ್ಲಿ ಒಂದು ಸತ್ಯಯುಗ ಕಳೆದು ಹೋಯಿತು. ನಂತರ ತ್ರೇತಾಯುಗದ ಆರಂಭದಲ್ಲಿ ಭರತಖಂಡದಲ್ಲಿ ಸುತ್ತಾಡತೊಡಗಿದಳು. ಸುತ್ತಾಡುತ್ತಾ ತಮಸಾನದಿಯ ತೀರವನ್ನು ತಲುಪಿದಳು.

ಅಲ್ಲಿ ಮಹರ್ಷಿ ವಾಲ್ಮೀಕಿಯು ತನ್ನ ಶಿಷ್ಯರೊಡಗೂಡಿ ವಾಸಿಸುತ್ತಿದ್ದನು. ಅಂದು ಕ್ರೌಂಚಪಕ್ಷಿಗಳ ಘಟನೆಯನ್ನು ನೋಡಿ ಮಹರ್ಷಿಯ ಬಾಯಿಂದ 'ಮಾ ನಿಷಾದ...' ಇತ್ಯಾದಿಯಾದ ಶ್ಲೋಕವು ಹೊರ ಬಂದಿತು. ಮಹರ್ಷಿಯನ್ನು ನೋಡಿದ ಕೂಡಲೆ ಆತನ ಅಸಾಧಾರಣ ಪ್ರತಿಭೆಯನ್ನು ಗುರುತಿಸಿದ ಸರಸ್ವತಿಯು ಪ್ರಪ್ರಥಮವಾಗಿ ಆತನ ನಾಲಿಗೆಯಲ್ಲಿ ನೆಲೆಸಿದಳು. ಆಕೆಯ ಪ್ರಭಾವದಿಂದಲೇ ಛಂದೋಬದ್ಧವಾದ ಮೇಲಿನ ಶ್ಲೋಕ ಹೊರಹೊಮ್ಮಿ, ಭಾರತದ ಪ್ರಥಮ ಮಹಾಕಾವ್ಯದ ರಚನೆಗೆ ಕಾರಣೀಭೂತಳಾದಳು. ಇದರಿಂದ ವಾಲ್ಮೀಕಿಯೂ 'ಆದಿಕವಿ'ಯಾದ.

ಈ ರೀತಿಯಲ್ಲಿ ಸರಸ್ವತೀದೇವಿಯು ಅನೇಕ ಜಗತ್ ಕಲ್ಯಾಣ ಕಾರ್ಯಗಳನ್ನು ನಡೆಸಿದಳು. ಬುದ್ಧಿ, ಜ್ಞಾನ ಮತ್ತು ವಿದ್ಯೆಯ ರೂಪದಲ್ಲಿ ಪ್ರಪಂಚವೆಲ್ಲ ಈಕೆಯ ಕೃಪೆಯ ಅನುಭವವನ್ನು ಪಡೆಯಿತು. ಈಕೆ ಅಂಶತಃ ನದಿ ಹಾಗೂ ಬ್ರಾಹ್ಮ ರೂಪದಲ್ಲಿ ಇರುವಳು. ಈಕೆಯೇ ಮುಂದೆ ಗೌರಿಯ ರೂಪವನ್ನು ಹೊಂದಿ 'ಕೌಶಿಕೀ' ಹೆಸರಿನಿಂದ ಪ್ರಸಿದ್ಧಳಾದಳು. ಆಗಲೇ ಶುಂಭ-ನಿಶುಂಭರನ್ನು ವಧಿಸಿ, ಪ್ರಪಂಚದಲ್ಲಿ ಸುಖ, ಶಾಂತಿಗಳು ನೆಲೆಸುವಂತೆ ಮಾಡಿದಳು. ತಂತ್ರ ಶಾಸ್ತ್ರ ಹಾಗೂ ಪುರಾಣಗಳಲ್ಲಿ ಈಕೆಯ ಮಹಿಮೆಗಳ ವಿಸ್ತೃತ ವರ್ಣನೆ ಇದೆ.

ಸರಸ್ವತಿಯ ವಾಹನ ಹಂಸ. ಇದು ಆಕಾಶ, ಭೂಮಿ ಎರಡರ ಮೇಲೆಯೂ ಚಲಿಸುತ್ತದೆ. ಇದು ನೀರ-ಕ್ಷೀರವನ್ನು ಬೇರೆ ಮಾಡಬಲ್ಲದು. ಇದನ್ನೆ ಹಂಸಕ್ಷೀರ ನ್ಯಾಯ ಎನ್ನುವುದು.

ಯಾರ ಮೇಲೆ ಸರಸ್ವತಿಯ ಅನುಗ್ರಹವಾಗುವುದೊ ಅವರ ಮೇಲೆ ಮಹಾಕಾಳಿ (ಯುದ್ಧದ ಪ್ರಧಾನ ದೇವತೆ) ಮತ್ತು ಮಹಾಲಕ್ಷ್ಮಿ (ಸಾಧನೆಗಳ ದೇವತೆ)ಯರು ಸ್ವಯಂ ಪ್ರಸನ್ನರಾಗುತ್ತಾರೆ ಎಂದು ನಂಬಲಾಗಿದೆ.

(ಆಧಾರಗಳಿಂದ)



# ಯುವವಾಣಿ

# ಪರೋಪಕಾರಾರ್ಥಮಿದಂ ಶರೀರಂ

ಈ ಶರೀರ ಪರರಿಗಾಗಿ
ಪರರಿಗುಪಕಾರಮಾಡಲಿಕ್ಕಾಗಿ
ಪರೋಪಕಾರವೇ ಪರಮಾತ್ಮನ ಭಕ್ತಿ

ರಕ್ತಮಾಂಸಾದಿಸಪ್ತಧಾತುಗಳ ವಿಕಾರ ನಮ್ಮ ಶರೀರ ಈ ಶರೀರದಲ್ಲಿ ಜೀವವಿರುವಷ್ಟರವರೆಗೆ ಒಂದಲ್ಲ ಒಂದು ವಿಧದಲ್ಲಿ ಸ್ನೇಹ ಸಂಕೋಲೆ ನಮ್ಮನ್ನು ಬಿಗಿದುಕೊಂಡಿರುತ್ತದೆ– ಆಸೆ ಆಕಾಂಕ್ಷೆ, ಬಯಕೆ ಹಂಬಲಗಳಿಂದ ತುಂಬಿಕೊಂಡಿರುತ್ತದೆ. ಎಣೆಯಿಲ್ಲದ ಆಸೆ, ಅಪೇಕ್ಷೆ ಫಲಕಾರಿಯಾದಷ್ಟೂ ಮತ್ತೂ ಮತ್ತೂ ಬೆಳೆಯುತ್ತಾ ಹೆಚ್ಚಿನ ಫಲಗಳನ್ನು ನಿರೀಕ್ಷಿಸುತ್ತದೆ. ಫಲನಿರೀಕ್ಷಣೆಯಲ್ಲಿ ನಮ್ಮ ಜೀವನದ ಬಹುತೇಕಕಾಲ ವ್ಯರ್ಥವಾಗುತ್ತದೆ.

ನಮ್ಮ ಜೀವನದ ಒಂದೊಂದು ಕ್ಷಣವೂ ಅನೂಲ್ಯ. ಅಪೂರ್ವ–ಈ ಅತ್ಯಮೂಲ್ಯ ಸಮಯವನ್ನು ವೃಥಾ ಹಾಳುಗೆಡಹದೆ ತನಗೆ ಒಳಿತಾಗಿ ಇತರರಿಗೂ ಒಳಿತನ್ನೇ ಉಂಟುಮಾಡುವಂತಹ ಸತ್ಕಾರ್ಯಗಳಿಗಾಗಿ ವಿನಿಯೋಗಿಸಬೇಕು.

ನಾವು ಸುಖದಿಂದಿರುವಾಗ ನಮ್ಮನ್ನು ವಿಚಾರಿಸಿಕೊಳ್ಳಲು ಬಹುತೇಕ ಜನರು ಬರುತ್ತಾರೆ. ನಮ್ಮ ಹತ್ತಿರ ಶ್ರೀಮಂತಿಕೆಯ ಕಾವು ಇರುವಷ್ಟರ ತನಕ ಬಂಧುತ್ವಭಾವದಲ್ಲಿ ನಮ್ಮೊಂದಿಗಿದ್ದು ನಮ್ಮ ಕೆಲಸ ಕಾರ್ಯಗಳಲ್ಲಿ ಸಹಕರಿಸಿ, ಸ್ನೇಹ ಹಸ್ತಚಾಚಲನೇಕರು ಧಾವಿಸಿ ಬರುತ್ತಾರೆ. ಆದರೆ ನಾವು ಕಷ್ಟದಲ್ಲಿ ಬಿದ್ದಾಗ, ಶ್ರೀಮಂತಿಕೆ ಕರಗಿದಾಗ ನಮ್ಮನ್ನು ವಿಚಾರಿಸುವ ಜನರೆಷ್ಟಿದ್ದಾರೆ? ಕೇಳಿದರೆ ಉತ್ತರ ಥಕ್ಕನೆ ಸಿಗಲಾರದು.

ಆಪತ್ಕಾಲದಲ್ಲಿ ಸಹಾಯಕ್ಕೆ ಬರುವವನೇ ನಮ್ಮ ನಿಜವಾದ ಬಂಧು, ಆತ್ಮೀಯ, ಹಾಗೂ ಆಜೀವಗೆಳೆಯ. ನಾವು ಆಪತ್ತಿಗೆ ಸಿಲುಕಿದಾಗ, ಬೇನೆ ಬೇಸರಗಳಿಂದ ನರಳಿ ಸಾಯುವಂತಾದಾಗ, ದುಡ್ಡಿಲ್ಲದೆ ತುತ್ತು ಅನ್ನ, ತುಂಡು ಬಟ್ಟೆಗಾಗಿ ಪರದಾಡುತ್ತಿರುವಾಗ ನಮಗೆ ಸಿಗುವ, ಸಿಗಬಹುದಾದ ಸ್ನೇಹಹಸ್ತ, ಸಾಂತ್ವನದ ನುಡಿ, ಕೊಡುಗೈಯ ದಾನ ನಮಗೆ ಉಪಕಾರವಾಗಿ ಪರಿಣಮಿಸುತ್ತದೆ. ಕಷ್ಟಗಳೇನೇ ಇರಲಿ. ನಮ್ಮ ನೆರವಿಗೆ ಬರುವಾತನ ಉಪಕಾರದಿಂದಾಗಿ ನಾವು ತಾತ್ಕಾಲಿಕ ಸುಖ ಹಾಗೂ ಸ್ಫೂರ್ತಿಗಳನ್ನು ಪಡೆಯುತ್ತೇವೆ. ಮನಸಿಗೊಮ್ಮೆ "ಅಯ್ಯಪ್ಪಾ" ಅನಿಸಿ ಜೀವದಾನ ಪಡೆದಂತಾಗುತ್ತದೆ. ಉಪಕಾರ ಒಂದುರೀತ್ಯಾ ಮಾನವ ಇನ್ನೊಬ್ಬ ಮಾನವನಿಗೆ ಸಮಯಾಸಮಯಗಳ ಪ್ರಜ್ಞೆ ಇಲ್ಲದೆ ಎಲ್ಲೆಂದರಲ್ಲಿಗೆ ಬಂದು ಮಾಡುವ ಸಕಾಲಿಕ ನೆರವು.

ಜೀವ–ಜೀವಾತ್ಮನಿಗೆ ಸಲ್ಲಿಸಬಹುದಾದ ತನುಮನಧನಗಳ ನಿಷ್ಕಾಮತ್ಯಾಗ. ಉಪಕಾರಬುದ್ಧಿ ಬೆಲೆಬಾಳುವ ಮುಕ್ತಿಗೆ ಸರಿಸಮಾನವಾದುದು. ಅದು ಜೀವಜಂತುಗಳ ಮೇಲೆ ಇರಬಹುದಾದ ಮಾನವನ ಅಂತಃಕರಣ ಮಮಕಾರಗಳನ್ನು ಪ್ರತಿಬಿಂಬಿಸುತ್ತದೆ.

ತನ್ನಲ್ಲಿದ್ದುದನ್ನು ಸಹೋದರ ಭಾವದಲ್ಲಿ "ಇಂದು ಅವನದ್ದಾಗಿರುವ ಕಷ್ಟ ನಾಳೆ ತನ್ನದ್ದಾಗಬಹುದು" ಎಂಬ ಮುಂದಾಲೋಚನೆಯಿಂದ ಪರಸ್ಪರ ಸಹಕರಿಸಿ ಸುಖದುಃಖಗಳಲ್ಲಿ ಸಹಭಾಗಿಯಾಗುವುದು, ಸಹ ಚಿಂತನೆ ನಡೆಸಿ ಸಮನ್ವಯ ಸಾಧಿಸಿ ಬೇಕಿದ್ದಲ್ಲಿ ಅಭಯ ಹಸ್ತ ನೀಡುವುದು–ಎಂದು ನಾವಿಲ್ಲಿ ಉಪಕಾರ ಪದಕ್ಕೆ ಅರ್ಥ ಕಲ್ಪಿಸಬಹುದು. ಉಪಕಾರ ಮಾಡಬೇಕೆನ್ನುವ ಈ ವಿಶಿಷ್ಟ ಗುಣ ಮಾನವ ಜನ್ಮ ಮಾತ್ರದಿಂದ ಎಲ್ಲರಲ್ಲಿಯೂ ಇರುವುದಿಲ್ಲ. ಸ್ವಾರ್ಥಪರ ಜನತೆಯೇ ಹೆಚ್ಚುತ್ತಿರುವ ಈ ವಿಜ್ಞಾನ ಯುಗದಲ್ಲಿ ಉಪಕಾರ ಬುದ್ಧಿಯುಳ್ಳವರು ಕೆಲವೇ ಮಂದಿ.

ಹತ್ತಿರದ ಮನೆಯೊಂದು ಬೆಂಕಿಹತ್ತಿ ಉರಿಯುತ್ತಿದ್ದಾಗ ತನ್ನ ಬಾವಿಯೊಳಗಿನ ನೀರನ್ನು ಬೆಂಕಿ ಆರಿಸಲೆಂದು ಉಪಯೋಗಿಸಿದರೆ ಮುಂದೆ ತನಗೆ ಕುಡಿಯಲು ನೀರಿಲ್ಲವಾದರೆ? – ಯೋಚಿಸುವಷ್ಟರ ಮಟ್ಟಿಗೆ ನಮ್ಮ ಸಂಕುಚಿತ, ಸ್ವಾರ್ಥ ಬಲಿಯುತ್ತಿದೆ. ಪ್ರತಿಫಲಾಪೇಕ್ಷೆಯುಳ್ಳ ನಾವು ಯಾರಿಗೇ ಆಗಲಿ ಉಪಕಾರದ ಮಾತೆತ್ತಿದರೆ ಅವನಿಗೆ ಮಾಡುವ ಉಪಕಾರದಿಂದ ನಮಗೇನು ಲಾಭ ಸಿಗುತ್ತದೆ? ಸ್ವಯಂ ಲಾಭದ ಯೋಜನೆಯಲ್ಲಿ ಮಾನವೀಯತೆಯ ಪ್ರತೀಕವಾದ ಪರೋಪಕಾರೀ ಗುಣವನ್ನು ಮರೆತು ಬಿಡುತಿದ್ದೇವೆ ನಮಗೆ ಬೇಡವಾದ ವಸ್ತುವೇ ಆಗಿರಲಿ, ಆ ತ್ಯಾಜ್ಯ ವಸ್ತು ಬೇರೊಬ್ಬನಿಗೆ ಉಪಕಾರಕ್ಕೆ ಬೀಳುತ್ತದೆಂದು ನಮಗೆ ಗೊತ್ತಾದರೆ ಅದೂ ಅವನ ಕೈಗೆ ಸಿಲುಕದಂತೆ ಮಾಡಲೆತ್ನಿಸುತ್ತೇವೆ. ಅದಕ್ಕೆ ಸರಿಯಾಗಿ ಮಾಡಿದುಪಕಾರ ಮರೆತು ನಮಗೆದುರಾಗಿ ಕೊನೆಗೊಂದು ದಿನ ನಮ್ಮನ್ನೇ ದಯಾದಾಕ್ಷಿಣ್ಯಗಳಿಲ್ಲದೆ ಬಲಿತೆಗೆದುಕೊಳ್ಳಲೂ ಹೇಸದ ಕೃತಘ್ನ ಮನೋಭಾವನೆಯ ಸಾಕಷ್ಟು ಜನರು ಈಗೀಗ ಎಲ್ಲೆಲ್ಲೂ ತಲೆ ಎತ್ತುತ್ತಿದ್ದಾರೆ. ಹೀಗಿರುವಾಗ ಊರವರ ಸುಖಕಷ್ಟ ಕಟ್ಟಿಕೊಂಡು ನಮಗೇನಾಗಬೇಕಾಗಿದೆ? ಅವರವರ ತಲೆಗೆ ಅವರವರದೇ ಕೈ ಎಂಬ ಉದಾಸೀನತೆಯಲ್ಲಿ ನಮ್ಮ ನಮ್ಮ ಸ್ವಾರ್ಥ ಸಾಧನೆಯಲ್ಲಿಯೇ ಮೈಮರೆಯುವುದು ಅತಿಶಯವೇನಲ್ಲ. ಆದರೂ 'ನಾನು ಮಾನವನಾಗಿ ಜನಿಸಿದ್ದೇನೆ. ಮನುಷ್ಯ ಜನ್ಮದಲ್ಲಿ ಜನಿಸುವ ಭಾಗ್ಯ ನನಗೆ ಸಿಕ್ಕಿದುದೇ ಬಹುದೊಡ್ಡ ಪುಣ್ಯ. ಈ ಪುಣ್ಯಫಲವನ್ನು ಚೆನ್ನಾಗಿ ಉಪಯೋಗಿಸಿಕೊಂಡು ಅಪಾಯಕಾರೀ ವಿಚ್ಛಿದ್ರ ಶಕ್ತಿಗಳ ಹಿಂಸೆ ಪ್ರತಿಹಿಂಸೆ, ಪ್ರತೀಕಾರ ಭಾವನೆಗಳನ್ನು ಸಂಪೂರ್ಣ

ಶ್ರೀ ಪಿ. ವ್ಯಾಸಕೃಷ್ಣ ತಂತ್ರಿ

ತೊರೆದು 'ನಾನೊಬ್ಬನಿಗೆ ಉಪಕಾರಕ್ಕೆ ಬಿದ್ದರೆ, ಅವನಿನ್ನೊಬ್ಬ ಉಪಕಾರಕ್ಕೆ ಬಾರದೇ ಬರುತ್ತಾನೆ'ಂಬ ವಿಶಾಲ ಮನೋಭಾವನೆ ಬೆಳೆಸಿಕೊಂಡು ಆತ್ಮಹಿತ ಪರಹಿತ ಕಾರ್ಯಾಚರಣೆಗಳಲ್ಲಿ ಜೀವಮಾನ ವ್ಯಯಿಸಿದರೆ ಪರಮಾತ್ಮನ ಕೃಪೆಯಲ್ಲಿ ಒಂದಲ್ಲ ಒಂದು ದಿನ ನಾವೂ ಜಗತ್ತಿನ ಮಹಾನ್ ಗಣ್ಯರಂತೆ ಅಮರರಾಗಿ ಉಳಿಯುವೆವೆಂಬುದರಲ್ಲಿ ಉತ್ಪ್ರೇಕ್ಷೆಯೇನಿಲ್ಲ.

ನಶ್ವರವಾದ ಈ ಜಗತ್ತಿನಲ್ಲಿ ಅಶಾಶ್ವತವಾದೊಂದು ದೇಹವನ್ನು ಧರಿಸಿ ಸಾಮಾನ್ಯ ವ್ಯಕ್ತಿಯಾಗಿ ಹತ್ತು ಜನರ ನಡುವೆ ಯಾವ ಒಂದೂ ಮಹತ್ಕಾರ್ಯ ಸಾಧಿಸದೆ ಹೇಳ ಹೆಸರಿಲ್ಲದೆ ಅಳಿಯುವುದಕ್ಕಿಂತ "ಹತ್ತು ಸಮಸ್ತರಿಗೆ ಬೇಕಾದವನಾಗಿ ಹತ್ತು ಮಂದಿಯ ಕಷ್ಟಕ್ಕೊದಗಿ ಬರುವ ಉಪಕಾರಿ ವ್ಯಕ್ತಿಯಾಗಿ ನಾವಳಿದರೂ ಪ್ರಪಂಚದಲ್ಲಿ "ಪರೋಪಕಾರಿ ವ್ಯಕ್ತಿ ಅವನೊಬ್ಬ ಇದ್ದ" ಎಂಬಷ್ಟರ ಮಟ್ಟಿಗಾದರೂ ನಮ್ಮ ಕುರಿತು ಇನ್ನೊಬ್ಬರು ಚಿಂತಿಸುವಷ್ಟು ನಾವು ನಮ್ಮ ಜೀವನಧ್ಯೇಯಗಳನ್ನು ರೂಪಿಸಿಕೊಂಡು "ಇದಂ ಶರೀರಂ ಪರೋಪಕಾರಾರ್ಥಂ" ಎಂಬ ಸತ್ಯದ ನುಡಿಯನ್ನು ಸತ್ಯಗೊಳಿಸಲೆತ್ನಿಸೋಣವೇ?





(18 ನೇ ಪುಟದಿಂದ)

ಹಟತೊಟ್ಟರು. ಇವರನ್ನು ಸಮಾಧಾನಿಸಿ ಕಳುಹುವ ವೇಳೆಗೆ ಕೃಷ್ಣನಿಗೆ ಸಾಕುಸಾಕಾಯಿತು. ನಂತರ ಕೃಷ್ಣ ರಾಮರು ಅಲ್ಲಿ ನೆರೆದಿದ್ದ ಹಿರಿಯರಿಗೆ ಗೋಪರಿಗೆ ಸಮಾಧಾನ ಹೇಳಿ ಮುಂದೆ ಹೊರಟು.

ಕೃಷ್ಣ ವಿರಹದಿಂದ ಕೊರಗಿ ಸೊರಗುವ ಗೋಪಿಯರ ಚಿತ್ರಣ ನಿತ್ಯಾತ್ಮನಲ್ಲೂ ದೀರ್ಘವಾಗಿ ಚಿತ್ರವಾಗಿದೆ. ಆದರೆ ಸೋಮದೇವನಷ್ಟು ನಾಟಕೀಯವಾಗಿ, ಜೀವಂತವಾಗಿ, ಆತ್ಮೀಯವಾಗಿ, ಭಾವಪೂರಿತವಾಗಿ, ಆಕರ್ಷಕವಾಗಿ, ಚಿತ್ರಿತವಾಗಿಲ್ಲ. ಈ ಭಾಗದಲ್ಲಿ ಭಕ್ತ–ಭಗವಂತನ ಮಧುರ ಭಾವದ ಭಕ್ತಿಪ್ರತಿಪಾದನೆ ಸೊಗಸಾಗಿದೆ.

ಸಕಲರನ್ನೂ ಬೀಳ್ಕೊಂಡ ಬಲರಾಮಕೃಷ್ಣರು ಹಲಮಂದಿ ಗೋಪರೊಡನೆ, ಅಕ್ರೂರನೊಂದಿಗೆ ಪ್ರಯಾಣ ಮಾಡುತ್ತ ಯಮುನಾನದಿಯದಡಕ್ಕೆ ಬಂದರು. ಸ್ವಲ್ಪ ಹೊತ್ತು ವಿರಮಿಸಿಕೊಳ್ಳುವ ಉದ್ದೇಶದಿಂದ ಎಲ್ಲರೂ ಅಲ್ಲಿಯೇ ಕುಳಿತರು. ಈ ಸಮಯವನ್ನೆ ಸಾಧಿಸಿದ ಅಕ್ರೂರ ಕೃಷ್ಣನ ಬಳಿಬಂದು "ದೇವ, ನಾನೀ ಯಮುನೆಯಲಿ ಸದ್ಭಾವ ಮಿಗಲವಗಾಹಿಸುವೆ ನೀವೀ ವಸುಧೆಗವತರಿಸಲಾಗದು, ರಥದ ಮೇಲಿಹುದು' ಎಂದು ಹೇಳಿ ನೀರಿಗಿಳಿದ. ಅವನ ಅತಿಶಯ ಭಕ್ತಿ ಭಾವ, ಪ್ರೀತಿಗಳಿಗೆ ಮನಸೋತ ಹರಿಗೆ ತನ್ನ ನಿಜಪ್ರಭಾವನ್ನು, ದಿವ್ಯರೂಪವನ್ನು ತೋರುವ ಮನಸ್ಸಾಯಿತು.

ಇತ್ತ ಅಕ್ರೂರ ಕೃಷ್ಣನನ್ನೆ ಸ್ಮರಿಸುತ್ತ ನದಿಯಲ್ಲಿ ಮುಳುಗಿದ. ಗೋಪಾಲಮಂತ್ರವನ್ನು ಹೇಳುತ್ತಿರುವಾಗಲೇ ಅವನಿಗೆ ಇದ್ದಕ್ಕಿದ್ದಂತೆ ಹರ್ಷ ಉಕ್ಕಿತು "ಜಲದೊಳಗೆ ರವಿಶತ ಕೋಟಿರಶ್ಮಿಯಲಿ ಮೆರೆವ ದೇಹಚ್ಛವಿಯ ವಿಕಚಾಂಬರುಹ ನೇತ್ರದ ಕೌಸ್ತುಭಾದ್ಯಾ ಭರಣದನುಪಮ ಶಂಖ ಚಕ್ರದ ವಿಷ್ಣು"ವನ್ನು ಕಂಡ. ಮುಂದೆ ಕವಿ ನಾಲ್ಕಾರು ಪದ್ಯಗಳಲ್ಲಿ ಅಕ್ರೂರನಿಗೆ ಕೃಷ್ಣ ಕಾಣಿಸಿಕೊಂಡ ಬಗೆಯನ್ನು ಚಿತ್ರಿಸಿದ್ದಾನೆ. "ಥಳಥಳಿಸಿ ಹೊಳೆವ ಅಹಿಲಲಾಮನ ಲಲಿತಕಾಯದ ಮೇಲೆ ಪವಡಿಸಿ ತಳಿತ ಸಾವಿರ ಹೆಡೆಮಣಿಯ ರಶ್ಮಿಗಳ ಲಹರಿಯಲಿ ಹೊಲಬುಗೆಡುತಜಭವ ಸುರೇಂದ್ರರ ಕುಲವದೋಲಯಿಸುತ್ತಮಿರೆ ಮೂಲಲನೆ ಸಹಿತೆಸೆದಿರ್ಪ ವಿಷ್ಣುವ ಕಂಡನಕ್ರೂರ". ಹೀಗೆ ಅಕ್ರೂರ ಆ ಮುಕುಂದನನ್ನು ಕಂಡು ದಿವ್ಯ ಪ್ರೇಮದಲ್ಲಿ ಮೈಯ್ಯಿಕ್ಕಿ ಸೌಖ್ಯದ ಸೀಮೆಯಲ್ಲಿ ಸಂತುಷ್ಟನಾಗಿ, ಕೈಮುಗಿದು ಕೊಂಡಾಡುತ್ತಿರುವಾಗಲೇ, ದೇವರದೇವನಾದ ಹರಿ ಅವನಿಗೆ ದಿವ್ಯಲೋಚನವನ್ನು ಕರುಣಿಸಿದ. ಈ ದಿವ್ಯ ದೃಷ್ಟಿಯಿಂದ ಅಕ್ರೂರ ಪರಮಾತ್ಮನ ವಿಶ್ವರೂಪ ದರ್ಶನವನ್ನು ಕಂಡು ತಣಿದ. ಕವಿ ಕೊಡುವ ಭಗವಂತನ ವಿಶ್ವರೂಪದರ್ಶನದ ಚಿತ್ರಗಳಲ್ಲಿ ಇದೊಂದು. "ಧರೆ ಫಣೀಶ್ವರ ದಿಗಿಭಕುಲ ಭೂಧರ ಸಮಸ್ತದ್ವೀಪಸಾಗರ ಗಿರಿಗಹನ ಸಹ ಪಳ್ಳಿನಗರ ಗ್ರಾಮ ಪಟ್ಟಣವ ವರಮುನಿಗಳಾಶ್ರಮವ ಧರಣೀಶ್ವರರ ತಳತಂತ್ರವನು ಘನಸಂಗರ ವಿವಾದವನಂತ ಕೋಟಿಯ ಕಂಡು ಬೆರಗಾದ."

ಹೀಗೆ ಎಷ್ಟೋ ಹೊತ್ತು ಕೃಷ್ಣನ ನಿಜರೂಪವನ್ನು ನೋಡುತ್ತ, ಆ ದಿವ್ಯದರ್ಶನ ಸುಖದಲ್ಲೇ ಲೀನನಾಗಿ ಹೋಗಿದ್ದ ಅಕ್ರೂರನಿಗೆ ಇದ್ದಕ್ಕಿದ್ದಂತೆ ರಥದಲ್ಲಿ ಕುಳಿತ ಬಲರಾಮಕೃಷ್ಣರ ನೆನಪಾಯಿತು. ಏನಿದದ್ಭುತ! ಎನ್ನುತ್ತ ಎಡಬಲಕ್ಕೆ ತಿರುಗಿದ. ದಾನವಾಂತಕ ರಥದ ಮೇಲೆಯೇ ಇದ್ದಾನೆ! ಅಕ್ರೂರನಿಗೆ ಸಂಶಯ ಬಂದು ಗೊಂದಲಕ್ಕೊಳಗಾದ "ತಾನಿದೆಲ್ಲಿಗೆ ಬಂದೆ, ಕಂಡೆನಿದೇನನೊಂದೇ ನಿಮಿಷದಲಿ ಹರಿತಾನೆ ತಪ್ಪದು ತನ್ನೊಲವು ಕೈಸಾರಿತೆನುತಿರ್ದ".

ಹುಲುಮನುಜನಾದ ನಾನೆಲ್ಲಿ, ಬ್ರಹ್ಮನನೆಲೆಯನ್ನು ಅರಿಯುವುದು ಎಂಬುದೆಲ್ಲಿ? ಮಾಧವನೊಲವು ನನಗಿಂದು ಫಲಿಸುವುದಕ್ಕೆ ಕಾರಣ 'ಹಿಂದೆ ಜನ್ಮಸಹಸ್ರದಲಿ ಸುರಸಿಂಧುವನ್ನು ನಾನು ಸೇವೆ ಮಾಡಿರಬೇಕು; ಯತಿವೃಂದವನ್ನು ಪೂಜಿಸಿದ್ದಿರಬೇಕು; ವೈಷ್ಣವ ಮಹಾಸಭೆಗೆ ವಂದಿಸಿದ್ದಿರಬೇಕು' ಎಂದು ಕೊಳ್ಳುತ್ತಾ ಯಮುನೆಯದಡಕ್ಕೆ ಬಂದು, ಸಮಸ್ತಗಂಧಾಮಳ ವಿಭೂಷಿತನಾಗಿ, ಜಪತಪ ಮೊದಲಾದ ವಿಧಿಗಳನ್ನು ಮಾಡಿ, ಬೇಗ ಬೇಗನೆ ಬಲಮುಕುಂದರ ಬಳಿಗೆ ಹರ್ಷದಿಂದ ನಡೆದು ಬಂದ, ಬಂದವನೇ ಕೃತಾರ್ಥ ಭಾವದಿಂದ ಹರಿಯ ಪಾದಕಮಲಕ್ಕೆರಗಿ, ಕೈಮುಮುಗಿದು "ತಂದೆ, ಜಯಜಯ ಭಾಗವತ ಜನಬಂಧು.......ಜಯ ಜಗನ್ಮಯ, ಜಯದಯಾಪರ..........."ಇತ್ಯಾದಿಯಾಗಿ ಮೈಮರೆತು ಸುತ್ತಿ ಸುತ್ತಿ, ಹರಿಬಲರ ರೂಪವನ್ನೆ ಎವೆಯಿಕ್ಕದೆ ನೋಡುತ್ತ ಅಡಿಗಡಿಗೆ ಮೈಯ್ಯಿಕ್ಕಿದ. ಕೊಂಚ ಸಮಯದ ಬಳಿಕ ತನ್ನ ಕಾರ್ಯವನ್ನು ನೆನಪಿಸಿಕೊಂಡು ಹರಿಯನ್ನು ಕುರಿತು 'ದೇವ, ಕಂಸ ನಿಮ್ಮ ಆಗಮನವನ್ನೇ ಕಾಯುತ್ತಿದ್ದಾನೆ. ನಾನು ಮೊದಲು ಹೋಗಿ ಆ ಕುಟಿಲ ವ್ಯಸನಿಯನ್ನು ಸಂತೈಸುತ್ತೇನೆ. ನೀವು ಮಧುರೆಯ ಉಪವನದ ವೈಭವವನ್ನು ನಿಧಾನವಾಗಿ ವೀಕ್ಷಿಸುತ್ತ ನನ್ನ ಗೃಹಕ್ಕೆ ಬಂದು ಇಳಿದು ಕೊಳ್ಳಿ' ಎಂದು ಬಿನ್ನವಿಸಿ ಬೀಳ್ಕೊಂಡು ತೆರಳಿದ.

–(ಸಶೇಷ)

(14 ನೇ ಪುಟದಿಂದ)

ಪೂರ್ಣವಾಗಿ, ಕೆಲವು ನಿಂದಾಸ್ತುತಿ ರೂಪವಾಗಿ, ಕೆಲವು ಸಂಪ್ರದಾಯ ಹಾಡುಗಳಾಗಿ, ಕೆಲವು ಮಂಗಳ ಗೇಯಗಳಾಗಿ ಕಾಣುತ್ತವೆ.

"ತಮನ ಸಂಹರಿಸಿ ವೇದವ
ತಂದೆ ಗೋವಿಂದ
ಅಮರರಿಗೊಲಿದಮೃತವ
ನಿತ್ತೆ ಗೋವಿಂದ
ರಮಣಿಯ ತಂದೆ ವರಾಹ ರೂಪಿ
ಗೋವಿಂದ
ಭ್ರಮಿಸಿ ಕಂಬದೊಳು ಉದ್ಭವಿಸಿದೆ
ಗೋವಿಂದ
ಕ್ಷಮೆಯನಳೆಯೆ ಬ್ರಹ್ಮಚಾರಿಯಾದೆ
ಗೋವಿಂದ
ಸಮರದೊಳಖಿಳ ರಾಜರ ಕೊಂದೆ
ಗೋವಿಂದ
ಕಮಲಾಕ್ಷ ಕಡಲ ಕಟ್ಟಿದ ದಿಟ್ಟ
ಗೋವಿಂದ
ಮಮತೆಯೊಳೆಳೆಯ ಗೋಗಳಕಾಯ್ದೆ
ಗೋವಿಂದ
ರಮಣಿಯರಿಗೊಲಿದು ಬತ್ತಲೆ ನಿಂತೆ
ಗೋವಿಂದ
ವಿಮಲ ತುರಗವೇರಿ ನಡೆಸಿದೆ
ಗೋವಿಂದ"

ಈ ಕೀರ್ತನೆಯಲ್ಲಿ ಯಥಾರ್ಥ ಕಥನವು ಕಾಣುತ್ತದೆ.

ದೇವಸ್ಥಾನದ ಅಧಿಕಾರಿಗಳು ಕನಕದಾಸರ ಹಿರಿಮೆಯನ್ನು ಅರಿತು ಏಕಾಂತ ಸೇವೆಗೆ ಅವಕಾಶ ಮಾಡಿಕೊಟ್ಟರೆಂದು ಐತಿಹ್ಯ. ಆವಾಗಿಂದಲೂ ಕನಕದಾಸರು ಏಕಾಂತಸೇವೆ ಸಮಯದಲ್ಲಿ ಲಾಲಿ ಹಾಡುಗಳನ್ನು ಹಾಡುತ್ತಿದ್ದರು. ಅವುಗಳಲ್ಲಿ ಪ್ರಸಿದ್ಧವಾದ ಹಾಡು–

ಲಾಲಿ ಪಾವನ ಚರಣ
ಲಾಲಿ ಅಘಹರಣ
ಲಾಲಿ ವೆಂಕಟರಮಣ
ಲಲಿತಕಲ್ಯಾಣ
ವನಜಾಕ್ಷ ಮಾಧವ
ವಸುದೇವತನಯ
ಸನಕಾದಿ ಮುನಿಸಂಸ್ತುತ
ಸಾಧುಜನಪ್ರಿಯ
ಜನಕೋಟಿ ಶತತೇಜ
ಮುನಿಕಲ್ಪಭೂಜ
ಕನಕಾದ್ರಿ ನಿಲಯ
ವೆಂಕಟರಾಯಜೀಯ

ಜಗದೇಕ ನಾಯಕ ಜಲಜದಳನೇತ್ರ
ಖಗರಾಜವಾಹನ ಕಲ್ಯಾಣ ಚರಿತ
ಸಗರ ತನಯಾರ್ಚಿತ ಸನಕಾದಿ ವಿನುತ
ರಘುವಂಶ ಕುಲ ತಿಲಕ ರಮಣೀಯ
ಗಾತ್ರ

ನರಮೃಗಾಕಾರಿ ಹಿರಣ್ಯಕ ವೈರಿ
ಕರಿರಾಜ ರಕ್ಷಕ ಕಾರುಣ್ಯ ಮೂರ್ತಿ
ಹರಿ ಆದಿಕೇಶವ ಗುರು ಅಪ್ರಮೇಯ
ಸಿರಿ ಧರ ಶೇಷಗಿರಿ ವರತಿಮ್ಮರಾಯ

ಕನಕದಾಸರು ತೊಂಭತ್ತು ವರ್ಷಕಾಲ ಜೀವಿಸಿದವರು. ಅವರು ತಿರುಪತಿಯಲ್ಲಿ ಶ್ರೀನಿವಾಸನಲ್ಲಿ ಅಂತರ್ಧಾನವಾದರೆಂದು ಹೇಳುವರು. ಕಾಗಿನೆಲೆ ಬಿಟ್ಟು ತಿರುಪತಿ ಸೇರಿದರು. ಪುರಂದರದಾಸರ ತಂಬೂರಿಯನ್ನು ತಿರುಪತಿಯ ಭಂಡಾರದಲ್ಲಿಟ್ಟರು. ತಮ್ಮ ಏಕತಾರಿಯನ್ನೂ ದಂಡವನ್ನೂ ಶ್ರೀನಿವಾಸನ ಗರ್ಭಗೃಹ ಪ್ರವೇಶವಾಡುವ ದ್ವಾರದ ಮೇಲ್ಭಾಗದಲ್ಲಿ ಬಂಧಿಸಿದರು. ವ್ಯಾಸರಾಯರಿಗೆ. ಪುರಂದರದಾಸರಿಗೆ ನಮೋವಾಕಗಳನ್ನು ಅರ್ಪಿಸಿದರು. ದೇವರ ಸೇವೆಗೆಂದು ಒಳಗೆ ಪ್ರವೇಶ ಮಾಡಿ ಐಕ್ಯರಾದರು.

ಹರಿದಾಸರ ಸಾಹಿತ್ಯದಲ್ಲಿ ಕನಕದಾಸರಿಗೆ ವಿಶಿಷ್ಟಸ್ಥಾನವಿದೆ. ಅವರು ಆ ಕಾಲದಲ್ಲಿ ಉತ್ತಮರೆಂದು ಭಾವಿಸಿದ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರಲ್ಲ. ವ್ಯಾಸಾದಿಗಳನ್ನು ಮಾಡಿದವರಲ್ಲ. ವೇದ ಪುರಾಣಾದಿಗಳನ್ನು ಕಲಿತವರಲ್ಲ. ಆದರೂ ಅವರು ವ್ಯಾಸರಾಯರ ಅಭಿಮಾನದ ಶಿಷ್ಯರು. ಅವರ ಜೀವನ ಒಂದು ಸಂಗ್ರಾಮ. ಲೌಕಿಕ ಸಂಗ್ರಾಮದಲ್ಲಿ ಅವರು ಸೋತು ಹೋದರೂ ಆಧ್ಯಾತ್ಮಿಕ ಸಂಗ್ರಾಮದಲ್ಲಿ ಜಯಿಸಿದರು. ಕೀರ್ತನಕಾರರಾಗಿ, ಕವಿಯಾಗಿ, ಭಕ್ತರಾಗಿ ಬಾಳಿದ ಕನಕದಾಸರು ಧನ್ಯರು.

ತಿರುಪತಿಯವಾಸ ಶ್ರೀವೇಂಕಟೇಶನು
ನೀನು
ಸ್ಮರಿಸಿ ನಿನ್ನಯ ನಾಮ
ಬದುಕುವವನು ನಾನು
—ಕನಕದಾಸರು



# ರಾಮಾನುಜ ನೂತ್ರಂದಾದಿ

( ಮುಂದುವರೆದದ್ದು )

ಎಂಬೆರುಮಾನಾರ್‌ರವರು ಅಮುದನಾರ್‌ರವರನ್ನು ಉದ್ದೇಶಿಸಿ "ನೀವು ನಮ್ಮನ್ನು ಬಿಟ್ಟು ಕಾಲಾನಂತರದಲ್ಲಿ ಬೇರೊಂದು ವಿಷಯವನ್ನು ಆದರಿಸಿದರೆ, ನಾವು ನಿಮ್ಮನ್ನು ಬಿಟ್ಟು ಬೇರೊಂದು ವಿಷಯದಲ್ಲಿ ಆಸಕ್ತಿ ಹೊಂದಿದರೆ ನಿಮ್ಮ ನಮ್ಮ ಸಂತೋಷವು ನೆಲೆ ಇಲ್ಲದಂತಾಗುವುದು" ಎಂದು ಕೇಳುತ್ತಾರೆ. ಆಗ ಅಮುದನಾರ್‌ರವರು "ನನ್ನ ನೈಚ್ಯಕ್ಕೆ ನಿಮ್ಮ ಕೃಪೆಯೂ, ತಮ್ಮ ಕೃಪೆಗೆ ನನ್ನ ನೈಚ್ಯವೂ ಪರಸ್ಪರ ಆಶ್ರಯ ಹೊಂದಿದಮೇಲೆ ನಮ್ಮಿಬ್ಬರ ಅಗಲಿರುವಿಕೆಗೆ ಕಾರಣ ಇಲ್ಲ" ಎನ್ನುತ್ತಾರೆ. ರಾಮಾನುಜರು ಈ ಪಾಪಪ್ರಚುರವಾದ ಭೂಲೋಕದಲ್ಲಿ ಅವತರಿಸಿರುವುದೇ ತನ್ನನ್ನು ಪರಿಪಾಲಿಸುವುದಕ್ಕೆ ಎನ್ನುತ್ತಾರೆ. ಚತುರ್ವೇದಗಳನ್ನು ಪಠಿಸುವ, ಹತ್ತು ಆಳ್ವಾರುಗಳನ್ನು ಕೊಂಡಾಡುವ ಶ್ರೀ ರಾಮಾನುಜರನ್ನು ಪೂಜಿಸುವ ವಂಶದವರೇ ನಮ್ಮನ್ನು ಆಳುವ ವಂಶಸ್ಥರು ಎನ್ನುವರು. ರಾಮಾನುಜಾಚಾರ್ಯರ ಗುಣಗಳಿಗೆ ಸೋತು, ಅವರ ದಾಸರಾಗಿರುವ ಮಹಾತ್ಮರುಗಳೇ ತಮ್ಮ ಕುಲನಾಥರೆನ್ನುವರು.

'ಚಂಚಲಂ ಹಿ ಮನಃ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವಂತೆ ಮನಸ್ಸು ಚಂಚಲವಾದದ್ದು, ಯಾವಾಗಲೂ ಒಂದು ವಿಷಯದಲ್ಲಿ ನಿಲ್ಲುವುದಿಲ್ಲ, ಆದ್ದರಿಂದ ಬೇರೊಂದು ಕಾಲದಲ್ಲಿ ಅಜ್ಞಾನ ಬೆಳೆದರೆ ಏನು ಮಾಡುವಿರಿ ಎಂದು ಕೇಳಿದವರಿಗೆ 'ತಾನು ಹಿಂದಿನಂತೆ ಇಲ್ಲ, ಶ್ರೀರಂಗನಾಥನ ಕೈಂಕರ್ಯ ಮಾಡುವುದೇ ನನ್ನ ಪರಮ ಪುರುಷಾರ್ಥ ಎಂದು ನಂಬಿರುವರೇ ತಮಗೆ ಬಂಧುಗಳು. ಆದ್ದರಿಂದ ಧರ್ಮನಿಷ್ಠರು, ಸತ್ಪುರುಷರು ಸ್ತುತಿಸುವ ರಾಮಾನುಜರನ್ನು ಈ ಲೋಕದಲ್ಲಿ ಆಶ್ರಯಿಸಿದ ನಂತರ ತಮ್ಮನ್ನು ಕವಿದಿದ್ದ ಅನ್ಯಶೇಷತ್ವ ಎಲ್ಲಾ ಮರೆತು ಹೋಯಿತು. ಅಜ್ಞಾನವು ತಮ್ಮ ಮನಸ್ಸಿಗೆ ಕಾಣುವುದಿಲ್ಲ. ತಮ್ಮ ಬಾಯಿ ಅವರ ಗುಣಗಳನ್ನು ಬಿಟ್ಟು ಬೇರೆ ಯಾವುದನ್ನೂ ಉಚ್ಚರಿಸುವುದಿಲ್ಲ. ಮತ್ತು ಮನಸ್ಸು ಸ್ಮರಿಸುವುದೂ ಇಲ್ಲ' ಎಂದು ಅಮುದನಾರ್‌ರವರು ಹೇಳುತ್ತಾರೆ.

ಕಲಿ ಪ್ರಯುಕ್ತವಾಗಿ ಅಜ್ಞಾನಾಂಧಕಾರವು ಎಲ್ಲೆಲ್ಲೂ ವ್ಯಾಪಿಸಿದ್ದ ಕಾಲದಲ್ಲಿ ಎಂಬೆರುಮಾನಾರ್‌ರವರು ಈ ಭೂಲೋಕದಲ್ಲಿ ಅವತರಿಸಿ ನಾಲ್ಕು ವೇದಗಳ ನಿರವಧಿಕ ತೇಜಸ್ಸಿನಿಂದ ಅಂಧಕಾರವನ್ನು ಓಡಿಸದೇ ಇದ್ದಿದ್ದರೆ ಶ್ರೀಮನ್ನಾರಾಯಣನಿಗೇ ಎಲ್ಲರೂ ಶೇಷಭೂತರೆಂದು ಯಾರೂ ತಿಳಿಯುತ್ತಿರಲಿಲ್ಲ ಎಂದು ಹೇಳುತ್ತಾರೆ.

'ಗುಣಮ್ ನಿತ್ತ್ರಿಳ್ ಕೊಣ್ಡಲ್' ಎಂದು ರಾಮಾನುಜಾಚಾರ್ಯರ ಕಲ್ಯಾಣಗುಣಗಳನ್ನು ಕೊಂಡಾಡುತ್ತಾರೆ. ಕ್ರೂರಪಾಪಿಯಾಗಿ ಸಂಸಾರವೆಂಬ ನರಕದಲ್ಲಿ ಮುಳುಗಿ ಒದ್ದಾಡುತ್ತಿದ್ದ ಅಮುದನಾರ್‌ರವರನ್ನು ದಾಸನಾಗಿ ಸ್ವೀಕರಿಸಿ (ಶೇಷ) ರಕ್ಷಿಸಿದ ಮೇಲೆ ಭಗವದ್ಧ್ಯಾನ ಪರರಾದ ಆಳ್ವಾರುಗಳನ್ನೂ, ಕೂರತ್ತಾಳ್ವಾರ್ ಮತ್ತು ರಾಮಾನುಜಾಚಾರ್ಯರುಗಳನ್ನು ಆಶ್ರಯಿಸಿದ ಮೇಲೆ ಪುಣ್ಯಪಾಪ ಎಂಬ ಎರಡು ವಿಧವಾದ ಕರ್ಮಗಳ ಬಂಧವು ತಪ್ಪಿದೆ. ಇನ್ನು ಮೇಲೆ ದುಃಖ ಪಡುವುದಿಲ್ಲ ವೆಂದು ಅಮುದನಾರ್‌ರವರು ಹೇಳುತ್ತಾರೆ.

ಭಗವಂತನ ಪಾದರವಿಂದಗಳೇ ಉಪಾಯ ಮತ್ತು ಉಪೇಯವೆಂದು ಉಪದೇಶಿಸಿ ಮಹಾಪಾಪಿಯಾದ ಅಮುದನಾರ್‌ರವರನ್ನು ಸಂಸಾರ ಸಾಗರದಿಂದ ರಾಮಾನುಜರು ಉದ್ಧರಿಸಿದ್ದಾರೆ ಎನ್ನುತ್ತಾರೆ.

ತಾವು ಮಿತಿಮೀರಿ ಮಾಡಿರುವ ಅಪರಾಧಗಳನ್ನು ನೋಡಿ ವಿಮರ್ಶಿಸಿ ತನ್ನಲ್ಲಿ ಯಾವ ತರಹದ ಒಳ್ಳೆಯೂ ಇಲ್ಲದಿರುವುದರಿಂದ ರಾಮಾನುಜರು ತಮ್ಮನ್ನು ಕೈಬಿಡಬಹುದು. ಆದುದರಿಂದ ಸರ್ವೋತ್ತಮರಾದ ರಾಮಾನುಜರನ್ನು ಆಶ್ರಯಿಸಿದವರುಗಳು ಏನೆಂದು ತಿಳಿಯುವರೋ ಎಂದು ರಾಮಾನುಜರ ಎದುರಿದುರಿಗೆ ವಿಜ್ಞಾಪಿಸಿ ಕೊಳ್ಳುತ್ತಾರೆ.

ಮತ್ತೊಂದು ಸಂದರ್ಭದಲ್ಲಿ 'ಪರಮಗುಹ್ಯವಾದ ಅರ್ಥವನ್ನು ಭೂರಿದಾನ ಮಾಡುವಂತಹ ಉದಾರ ಮನಸ್ಕರಾದ ರಾಮಾನುಜರೇ, ಎಂದು ಸಂಬೋಧಿಸಿ, ಅವರ ಚರಣಗಳಿಗೆ ವಂದಿಸಿ ತಾವು ಅವರ ಗುಣಗಳಲ್ಲಿ ಅತ್ಯಭಿನಿವಿಷ್ಟರಾಗಿ ಅವರ ಧ್ಯಾಸದಲ್ಲಿ ಆಸಕ್ತರಾಗಿರುವುದಾಗಿ ತಿಳಿಸುತ್ತಾರೆ. ಇದರಿಂದ ತಮ್ಮ ಹಿಂದಿನ ಪಾಪಕರ್ಮ ಫಲವೆಲ್ಲಾ ತಮ್ಮನ್ನು ಬಿಟ್ಟು ಓಡಿ ಹೋಗಿರುವುದಾಗಿ ತಿಳಿಸುತ್ತಾರೆ.

ರಾಮಾನುಜರು ಚಂದ್ರನಂತೆ ಆಹ್ಲಾದಕರವಾದ ಶಾಂತ ಸ್ವಭಾವದಿಂದಲೂ, ಎಲ್ಲರಿಗೂ ರಕ್ಷಕರಾಗಿಯೂ ತತ್ತ್ವಹಿತ ಪುರುಷಾರ್ಥಗಳನ್ನು ತಿಳಿಸುವ ಸಾರತಮ ಜ್ಞಾನವನ್ನು ಉಪದೇಶಿಸಿದ ಎಂಬೆರುಮಾನಾರ್‌ರವರನ್ನು ಧ್ಯಾನಮಾಡುವ ಮನಸ್ಸೊಂದು ಬಿಟ್ಟು ತಮಗೆ ಬೇರೆ ಉಜ್ಜೀವನೋಪಾಯ ಇಲ್ಲವೆನ್ನುವರು.

ಮತ್ತೊಂದು ಸಂದರ್ಭದಲ್ಲಿ ಅಮುದನಾರ್‌ರವರು ರಾಮಾನುಜರ ಗುಣಗಳನ್ನು ಶ್ರೀಮನ್ನಾರಾಯಣನಿಗೇ ಹೋಲಿಸುತ್ತಾರೆ. ಸರ್ವೇಶ್ವರನಾದ ಶ್ರೀಮನ್ನಾರಾಯಣನು ಅನೇಕ ಅವತಾರಗಳನ್ನು ಮಾಡಿ ತನ್ನ ಆಜ್ಞೆಯನ್ನು ಉಲ್ಲಂಘಿಸಿದ ದುಷ್ಟರನ್ನು ನಾಶಪಡಿಸಿದಂತೆ, ರಾಮಾನುಜರು ವೇದಬಾಹ್ಯರನ್ನೂ, ಕುದೃಷ್ಟಿಗಳನ್ನೂ ಸಮಯೋಚಿತವಾದ ಯುಕ್ತಿಗಳಿಂದ ಖಂಡಿಸಿದರು ಎಂದು ಅವರ ಗುಣಗಳನ್ನು ಕೊಂಡಾಡುತ್ತಾರೆ.

ರಾಮಾನುಜರ ಕಲ್ಯಾಣ ಗುಣಗಳು ತಮ್ಮನ್ನು ಹೀಗೆ ಆಕರ್ಷಿವೆ ಎಂಬುದನ್ನು ಅವರು ತಿಳಿಯ ಪಡಿಸುತ್ತಾರೆ. 'ತಮ್ಮ ಗುಣ ಚೇಷ್ಟಿತಗಳನ್ನು ಅನುಸಂಧಿಸಿದ ವಾರ್ತೆಗಳನ್ನು ಕೇಳಿ ರಾಮನುಜರು ಭಗವದ್ವಿಷದಲ್ಲಿ ಅವನ ವೈಲಕ್ಷಣ್ಯಗಳನ್ನು ಕಂಡಾಗ ತಮ್ಮಲ್ಲಿರುವ ಪ್ರಾವೀಣ್ಯ ಹಾಗೆಯೆ ಇರುವುದೆ ಎಂದು ಕೇಳಿದರು. ಸರ್ವೇಶ್ವರನು ಶಂಖ ಚಕ್ರ ಗದಾಪಾಣಿಯಾಗಿ ದಿವ್ಯಾಯುಧಾಲಂಕೃತನಾಗಿ ದಾಸನಾಗಿ ತಾವು ಇರುವ ಸ್ಥಳವನ್ನು ಹುಡುಕಿಕೊಂಡುಬಂದು "ನಿನ್ನನ್ನು ನಾನು ಬಿಡುವುದಿಲ್ಲ" ಎಂದು ಮುಂದೆ ಬಂದು

ಶ್ರೀಮತಿ ಬಿ. ಎಸ್. ವಿಜಯಮ್ಮ

ನಿಂತರೂ, ರಾಮಾನುಜರ ಪಕ್ಕದಲ್ಲೇ ಇರಲು ಇಷ್ಟಪಡುವಂತೆ, ಅವರ ಕಲ್ಯಾಣಗುಣಗಳು ತಮ್ಮನ್ನು ಆಕರ್ಷಿಸುತ್ತಿರುವುವು ಎಂದು ಬಿನ್ನವಿಸಿಕೊಳ್ಳುತ್ತಾರೆ.

ರಾಮಾನುಜರಿಗೆ ಶಾಶ್ವತವಾದ ಕೀರ್ತಿಯನ್ನು ತಂದ ಮತ್ತು ಹರಿಯುತ್ತಿರುವ ಝರಿಗಳುಳ್ಳ ಶ್ರೀ ವೆಂಕಟಾದ್ರಿಯೂ, ಶ್ರೀವೈಕುಂಠವೂ, ಕ್ಷೀರಾಬ್ಧಿಯೂ ಅವರಿಗೆ ಆನಂದವನ್ನು ಉಂಟುಮಾಡುವಂತೆ, ಹೂವಿನಂತೆ. ಮೃದುವಾಗಿಯೂ ಸುಂದರವಾಗಿಯೂ ಇರುವ ರಾಮಾನುಜರ ಪಾದಗಳು ಅಮುದನಾರ್ ರವರಿಗೆ ಆನಂದಮಯ ಸುಖವನ್ನು ಉಂಟುಮಾಡುವುವೆಂದು ಹೇಳುತ್ತಾರೆ. ಅಂತಹ ಶ್ರೀಪಾದಗಳನ್ನು ತಮಗೆ ಕೃಪೆಮಾಡಿ ಎಂದು ರಾಮಾನುಜರಲ್ಲಿ ಪ್ರಾರ್ಥಿಸುತ್ತಾರೆ.

ಇವರ ಪ್ರಾರ್ಥನೆಗೆ ರಾಮಾನುಜರು ತಮ್ಮ ಪಾದಾರವಿಂದಗಳನ್ನು ಸದಾಕಾಲ ಅನುಭವಿಸುವಂತೆ ಕೊಡಲು, ಆದಕ್ಕೆ ಕೃತಾರ್ಥರಾಗಿ 'ವೇದ ವಿರೋಧಿಗಳಾದ ಕುದೃಷ್ಟಿ ಮತಗಳನ್ನೂ ಪ್ರಮಾಣತಮವಾದ ವೇದಾರ್ಥಗಳಿಂದ ನಾಶಮಾಡಿ ಭೂಮಿಯಲ್ಲಿ ಯಶಸ್ಸುಗಳಿಸಿದರು ರಾಮಾನುಜರು. ತಮಗೆ ಇನ್ನೂ ಏನೇನು ಉಪಕಾರ ಮಾಡಬೇಕೆಂದಿರುವರೊ' ಎಂದು ಹೇಳಿ ತಮಗೆ ಯಾರಲ್ಲಿಯೂ ತೋರಿಸದೆ ಇರುವಷ್ಟು ಕೃಪೆ ತೋರಿಸಿದ್ದಾರೆ ಎಂದು ಧನ್ಯರಾಗುತ್ತಾರೆ.

ರಾಮಾನುಜರು ಇದುವರಿಗೆ ತಮ್ಮ ದೋಷಗಳನ್ನು ತಿದ್ದಿ ಶ್ರಿಯಃಪತಿಗೆ ದಾಸನನ್ನಾಗಿ ಮಾಡಿದ ಮೇಲೆ ಇತರ ವಿಷಯಗಳು ತಮ್ಮ ಮನಸ್ಸಿನಲ್ಲಿ ನಿಲ್ಲಲಾರವು ಎನ್ನುತ್ತಾರೆ. ವೇದದ ಅಪಾರ್ಥಗಳಿಂದ ದೂರಮಾಡಿ, ಭೂಲೋಕದಲ್ಲಿ ಅದರ ಸತ್ಯವಾದ ಅರ್ಥವನ್ನು ಪರಿಪಾಲಿಸುವ ಎಂಬೆರುಮಾನಾರ್‌ರವರು ಇರುವಾಗ ಅವರನ್ನು ಬಿಟ್ಟು ನಮ್ಮನ್ನು ರಕ್ಷಿಸುವ ಬೇರೊಂದು ದೈವವುಂಟೊ ಎಂದು ಮನಸ್ಸಿನ ಚಿಂತೆಯಿಂದ ಕೃಶರಾಗಿ ಹೋಗುವರನ್ನು ಕಂಡು ಅಮುದನಾರ್‌ರವರು ದುಃಖಿಸುತ್ತಾರೆ.

ರಾಮಾನುಜರು ತಮ್ಮ ನಿರ್ಹೇತುಕ ಪರಮಕೃಪೆಯನ್ನು ಸಕಲ ಚೇತನರ ಮೇಲೂ ಬೀರಿ, ಲೋಕದಲ್ಲಿ ಎಲ್ಲರೂ ಸುಲಭವಾಗಿ ಕಾಣುವ ಶ್ರೀರಂಗಕ್ಷೇತ್ರದಲ್ಲಿ ನೆಲಸಿ ಆ ಸ್ವಾಮಿಯೇ ಶೇಷಿ ಎಂದೂ ಉಪದೇಶಿಸಿದರು, ಈ ಹಿಯ ತತ್ತ್ವವನ್ನು ಭೂಲೋಕದಲ್ಲಿ ಇರುವವರಿಗೆಲ್ಲಾ ಭೂರಿದಾನ ಮಾಡಿದ ರಾಮಾನುಜರ ಉಪಕಾರವನ್ನು ನೆನೆದು ಅಮುದನಾರ್ ಅವರನ್ನು ಕೊಂಡಾಡುತ್ತಾರೆ.

ತಾವು ಯಾವ ಸತ್ಕಾರ್ಯವನ್ನೂ ಮಾಡಿಲ್ಲ. ರಾಮಾನುಜರಾದರೋ ಎಣೆಯಿಲ್ಲದ ಸೌಭಾಗ್ಯವುಳ್ಳ ಗುಣವನ್ನೂ, ಕೀರ್ತಿಯನ್ನೂ ಹೊಂದಿರುವರು. ಇಷ್ಟು ದಿನ ಸುಮ್ಮನಿದ್ದು ಈಗ ತಮ್ಮ ಒಳ ಮತ್ತು ಹೊರಕಣ್ಣುಗಳಿಗೆ ವಿಷಯವಾಗಿ ನಿಂತಿರುವುದಕ್ಕೆ ಕಾರಣವೇನೆಂದು ವಿಜ್ಞಾಪಿಸಿಕೊಳ್ಳುತ್ತಾರೆ. ಅದಕ್ಕೆ ಉತ್ತರ ದೊರೆಯದೇ ಇದ್ದುದರಿಂದ ನಾನು ಮಾಡಿದ ಪಾಪಗಳನ್ನು ತಮ್ಮ ಕೃಪೆಯೆಂಬ ಖಡ್ಗದಿಂದ ಪೂರ್ಣವಾಗಿ ನಾಶಮಾಡಿದರು. ಪ್ರಪನ್ನಕುಲಕ್ಕೆಲ್ಲಾ ಉತ್ತಾರಕರಾದ ರಾಮಾನುಜರು ಸತ್ಯ ಪ್ರಮಾಣವೇದಾರ್ಥಗಳನ್ನೆಲ್ಲಾ ಸಾರುವ ಪರಮೋಪಕಾರ ಮಾಡಿದವರೆಂದು, ಕೊಂಡಾಡುತ್ತಾರೆ. ಲೋಕದಲ್ಲಿ ಅಪಸಿದ್ಧಾಂತಗಳನ್ನೇ ವೇದಾರ್ಥಗಳೆಂದು ಭ್ರಮಿಸುವಂತೆ ಮಾಡುವ ಕೆಟ್ಟ ಜನಗಳನ್ನು ನಾಶಮಾಡಿದವರೆಂದು ಹೇಳುವರು. ರಾಮಾನುಜರನ್ನು ಆಶ್ರಯಿಸಿದವರಿಗೆ 'ಶರಣಾಗತಿನಿಷ್ಠೆ' ಎಂಬ ಪ್ರಪತ್ತ್ಯುಪಾಯವನ್ನು ಕೈಂಕರ್ಯರೂಪವಾದ ಸಂಪತ್ತನ್ನೂ ನೀಡಿ ಸಂಸಾರ ಸಂಬಂಧ ಮೂಲವಾದ ಕ್ರೂರ ಪಾಪಗಳನೆಲ್ಲಾ ನಾಶಪಡಿಸಿದ್ದಾರೆ ಮತ್ತು ಪರಮ ಪುರುಷಾರ್ಥವಾದ ಮೋಕ್ಷವನ್ನು ಅನುಗ್ರಹಿಸಿ ಉಪಕಾರ ಮಾಡಿದವರು. ತಾವು ಅವರ ಕಲ್ಯಾಣ ಗುಣಗಳನ್ನು ಬಿಟ್ಟು ಬೇರೊಂದನ್ನು ಅನುಭವಿಸುವುದಿಲ್ಲ ಎಂದು ಹೇಳುತ್ತಾರೆ.

ಸಕಲ ಜೀವಾತ್ಮರುಗಳಿಗೂ ಅಂತರ್ಯಾಮಿಯಾಗಿ ಅವರವರ ಸಕಲ ಪ್ರವೃತ್ತಿ ನಿವೃತ್ತಿ ಕಾರ್ಯಗಳನ್ನು ಮಾಡುತ್ತಿರುವ ಆ ಸರ್ವೇಶ್ವರನು ಇರುವಂತೆ ಆಶ್ರಿತರಲ್ಲಿ ವ್ಯಾಮೋಹವನ್ನು ಹೊಂದಿದವನಲ್ಲ ಎನ್ನುವಂತೆ ತಮ್ಮ ಜ್ಞಾನ ವೈರಾಗ್ಯಾದಿ ಸದ್ಗುಣ ವಿಶೇಷಗಳಿಂದ, ಸಂಸಾರಿಗಳಿಂದ ಅತ್ಯಂತ ಭಿನ್ನರಾಗಿರುವ ಇವರು ಪರಮ ಪ್ರಾಪ್ಯವನ್ನು ಎಲ್ಲಾ ಚೇತನರಿಗೂ ಕೊಡುವುದಕ್ಕಾಗಿಯೇ ಈ ಭೂಮಿಯಲ್ಲಿ ಅವತರಿಸಿದರು. ಇವರು ಸರ್ವಕಾಲದಲ್ಲೂ ಉತ್ಕೃಷ್ಟವಾದ ನಾಲ್ಕು ವೇದಗಳೂ ಪ್ರಕಾಶವಾಗಿ ವೃದ್ಧಿಹೊಂದುವಂತೆ ಮಾಡಿದರು. ಇವರು ಶ್ರೀ ಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯರೆಂದು ಪ್ರಸಿದ್ಧಿಯನ್ನು ಪಡೆದರು.

ಮತ್ತೊಂದು ಸಂದರ್ಭದಲ್ಲಿ ಪಕ್ಕದಲ್ಲಿದ್ದವರು "ಮೋಕ್ಷಾಧಿಕಾರಿಗಳಿಗೆ ಹೇಳಿದ ಶರಣಾಗತಿಯಲ್ಲಿ ನಿಷ್ಠರಾಗಿದ್ದೀರೋ?" ಎಂದು ಕೇಳಿದಾಗ, ಅದಕ್ಕೆ ಶರಣಾಗತಿ ಹೊಂದಲು ಪ್ರತಿಬಂಧಕವಾದ ಕರ್ಮಗಳಿಂದಲೂ, ರಕ್ತಮಾಂಸಗಳಿಂದ ಕೂಡಿದ ಶರೀರವು ಸಂಪೂರ್ಣವಾಗಿ ನಾಶಹೊಂದುವವರೆಗೂ ಸುಖ ದುಃಖಗಳನ್ನು ಅನುಭವಿಸುತ್ತಾ, ಶತ್ರುಪುತ್ರಾದಿಗಳಿಗೆ ಸಿಕ್ಕಿ ಬೇರೇನೂ ಸಹಾಯವಿಲ್ಲದೆ ಏಕಾಂಗಿಯಾಗಿ ತಿರುಗುತ್ತಿದ್ದ ಅಮುದನಾರ್‌ರವರಿಗೆ ಎಂಬೆರುಮಾನಾರ್‌ರವರು ಆಶ್ರಯ ಕೊಟ್ಟಿರುವುದರಿಂದ ಅವರೇ ತಮಗೆ ರಕ್ಷಕರೆಂದು ನಂಬಿರುವುದಾಗಿ ಹೇಳುತ್ತಾರೆ.

'ತಿರುವುಮುತ್ತರಿಯೇ' ಎಂದು ಇರುವವರೇ ತಮಗೆ ಆಶ್ರಿತರಕ್ಷಕರು ಎಂದು ಹೇಳಿದುದುದಲ್ಲದೆ ಇಲ್ಲಿ 'ದಿಕ್ಕುತ್ತ ಕೀರ್ತಿ' ಎಂಬ ದಿಗಂತದವೆಲ್ಲಾ ವ್ಯಾಪಿಸಿರುವ ರಾಮಾನುಜಾಚಾರ್ಯರ ವೈಭವವನ್ನು, ಕಣ್ಣುಗಳಿಂದ ಕಂಡು, ಕಿವಿಯಿಂದ ಕೇಳಿ ರಾಮಾನುಜರ ಕೈಂಕರ್ಯ ಮಾಡುವವರನ್ನು ಬಿಟ್ಟು, ಅಮುದನಾರ್‌ರವರನ್ನೇ ತಮ್ಮ ಸೇವೆಗೆ ಅಂಗೀಕರಿಸಿದರೆಂದರು. ಈ ರೀತಿ ಅಮುದನಾರ್‌ರವರು ರಾಮಾನುಜರ ಕೃಪಾಕಟಾಕ್ಷವನ್ನು ಹೊಗಳುತ್ತಾರೆ.

ಅಮುದನಾರ್‌ರವರು ತಮ್ಮ ಮನಸ್ಸನ್ನು ಕುರಿತು ರಾಮಾನುಜಾಚಾರ್ಯರನ್ನು 'ಶರಣಂ' ಎಂದು ಮೊರೆಹೊಕ್ಕಿರುವೆನು ಎಂದು ಹೇಳತಕ್ಕ ಚೇತನರನ್ನು ಸ್ವರ್ಗದಲ್ಲಾಗಲಿ ನರಕದಲ್ಲಿಯಾಗಲಿ ಇಟ್ಟು ದುಃಖಪಡುವಂತೆ ಮಾಡುವುದಿಲ್ಲ. ಪುನಃ ಹುಟ್ಟು ಸಾವುಗಳು ಇರುವಂತೆಯೂ ಮಾಡುವುದಿಲ್ಲ. ಉತ್ತಮವಾದ ಮೋಕ್ಷ ಸಾಮ್ರಾಜ್ಯವನ್ನು ಕೊಡುವರು ಎಂದು ಹೇಳುವರು 'ರಾಮಾನುಜರನ್ನು ಆಶ್ರಯಿಸಿ ಭಾಗವತ ಕೈಂಕರ್ಯ ನಿರತರಾದವರಿಗೆ ಸಂಸಾರ ತಾಪತ್ರಯ ಏರುವುದಿಲ್ಲ' ಎಂದು ಮನಸ್ಸಿಗೆ ಧೈರ್ಯವನ್ನು ಹೇಳುತ್ತಾರೆ.

ಭೂಲೋಕದಲ್ಲಿ ಬಾಹ್ಯ ದೃಷ್ಟಿಗಳು ವ್ಯಾಪಿಸಿ, ಲೋಕದವರನ್ನೆಲ್ಲಾ ಮೋಹಗೊಳಿಸಿ ಹಾಳುಮಾಡುತ್ತಿದ್ದ ಕಾಲದಲ್ಲಿ ವೇದಮಾರ್ಗ ಪ್ರತಿಷ್ಠಾಪನೆಯ ಮೂಲಕ ಅವರನ್ನೆಲ್ಲಾ ಜಯಿಸಿ ತಮಗೆ ಕಲ್ಪವೃಕ್ಷ ಪ್ರಾಯರಾದರೆಂದು ಹೇಳುತ್ತಾರೆ. ತಮಗೆ ಯಾವುದಾದರೂ ಬೇರೊಂದು ವಿಷಯವನ್ನು ತೋರಿಸಿ ಮೋಹಗೊಳಿಸಬೇಡಿ ಎಂದು ರಾಮಾನುಜರಲ್ಲಿ ಅಮುದನಾರ್‌ರವರು ಪ್ರಾರ್ಥಿಸಿಕೊಳ್ಳುತ್ತಾರೆ. ಭೂಲೋಕದಲ್ಲಿರುವ ಎಲ್ಲಾ ಚೇತನರನ್ನೂ ಬಿಟ್ಟು, ಶ್ರೀರಾಮಾನುಜಾಚಾರ್ಯರ ಔದಾರ್ಯವು ತಮ್ಮ ಒಬ್ಬರ ಮೇಲೆ ಬೆಳೆದು ಬರಲು ಕಾರಣವೇನು ಎಂದು ಅವರನ್ನೇ ಪ್ರಶ್ನಿಸುತ್ತಾರೆ.

ನರಸಿಂಹವತಾರವೆತ್ತಿ ಮೂರು ಲೋಕದ ಏಕಚಕ್ರಾಧಿಪತ್ಯವನ್ನು ಮಾಡಿಕೊಂಡು ತಿರುಗುತ್ತಿದ್ದ ಆ ಹಿರಣ್ಯಕಶಿಪುವಿನ ಸುವರ್ಣದಂತಿದ್ದ ಶರೀರವನ್ನು ಸೀಳಿಹಾಕಿದ ಸರ್ವೇಶ್ವರನ ಕೀರ್ತಿ

ಯನ್ನು ಸದಾ ಧ್ಯಾನ ಮಾಡುತ್ತಿರುವ ಸ್ವಾಮಿ ಎಂಬೆರುಮಾನಾರ್‌ರವರು ಅಮುದನಾರ್‌ರವರ ಆಧ್ಯಾತ್ಮಿಕಾದಿ ದುಃಖಗಳನ್ನು ಹೋಗಲಾಡಿಸಿ ಅಂಗೈಯಲ್ಲಿರುವ ನೆಲ್ಲಿಕಾಯಿಯಂತೆ ತತ್ತ್ವಹಿತ ಪುರುಷಾರ್ಥಗಳ ನಿಜವಾದ ಸ್ವರೂಪವನ್ನು ತಾವಾಗಿಯೇ ಸ್ಪಷ್ಟವಾಗಿ ಉಪದೇಶಿಸಿ ಅವರಿಗೆ ಪ್ರಜ್ಞೆಯನ್ನು ಕರುಣಿಸಿದರೆಂದು ಹೇಳುತ್ತಾರೆ.

ಕ್ಷೀರಸಾಗರದಲ್ಲಿ ಯೋಗನಿದ್ರೆಯಲ್ಲಿ ಮಲಗಿರುವ ಶ್ರೀಮನ್ನಾರಾಯಣನ ಗುಣಗಳಲ್ಲಿ ಮಗ್ನರಾಗಿರುವ ವೈದಿಕೋತ್ತಮರಿಂದ ಸತತವಾಗಿ ಸೇವೆ ಮಾಡಿಸಿಕೊಳ್ಳುತ್ತಿರುವ ದಿವ್ಯ ಚರಣಗಳನ್ನುಳ್ಳ ಎಂಬೆರುಮಾನಾರ್‌ರವರನ್ನು ಸದಾ ಗಾಯನ ನೃತ್ಯಗಳಿಂದ ಅನುಭವಿಸುತ್ತಿರುವವರ ಸ್ಥಳವೇ ಅವರ ದಾಸನಾದ ತಮಗೂ ವಾಸಸ್ಥಳ ಎಂದು ಹೇಳುವರು.

ಸ್ವಾಮಿ ಎಂಬೆರುಮಾನಾರ್‌ರವರು ಸರ್ವೇಶ್ವರನಿಗೆ ಪ್ರಿಯತಮವಾದ ವೈಕುಂಠ, ವೆಂಕಟಗಿರಿ, ತಿರುಮಾಲಿರುಂಶೋಲೈ – ಈ ದಿವ್ಯದೇಶಗಳ ಪತಿಯಾದ ಸರ್ವೇಶ್ವರನೊಡನೆ ಅತ್ಯಂತಾದರದಿಂದ ಬಂದು ತನ್ನ ಹೃದಯದಲ್ಲಿ ನೆಲಸಿದರು ಎಂದು ಅಮುದನಾರ್‌ರವರು ಹೇಳುತ್ತಾರೆ.

ಅಸ್ತಿಗತವಾಗಿ ನಿಂತು ಪೀಡಿಸುವ ವ್ಯಾಧಿಗಳಿಗೆ ಭಾಜ್ಯವಾದ ಹುಟ್ಟು, ಸಾವು, ಮರಣ–ಇವುಗಳ ದುಃಖಗಳನ್ನು ಅನುಭವಿಸಿದ ನಾಶ ಹೊಂದಿದರೂ ಸರ್ವಕಾಲ, ಸರ್ವದೇಶ, ಸರ್ವಾವಸ್ಥೆಗಳಲ್ಲೂ ಎಂಬೆರುಮಾನಾರ್‌ರವರ ಸೇವೆಯನ್ನು ಮಾಡುವಂತೆ ದಾಸನಾದ ತಮ್ಮನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಾರೆ.

ಕಡೆಯದಾಗಿ ಪುಷ್ಪದಂತೆ ಸುಕುಮಾರವಾದ ರಾಮಾನುಜರ ದಿವ್ಯ ಚರಣಗಳಿಂದ ತಮ್ಮ ತಲೆಯನ್ನು ಅಲಂಕರಿಸಿಕೊಂಡು ಅಲ್ಲಿಯೇ ಆ ಪಾದಗಳನ್ನು ಸದಾ ನೆಲೆಸಿರುವಂತೆ ಕೃಪೆಮಾಡಿರುವುದರಿಂದ, ಶ್ರೀರಂಗನಾಯಕಿ ಮತ್ತು ಶ್ರೀರಂಗನಾಥರಿಗೆ ಮಂಗಳಾಶಾಸನ ಮಾಡೋಣವೆಂದು ಭಕ್ತಿತತ್ತ್ವವು ತಮ್ಮಲ್ಲಿ - ಸದಾ ಕಾಲ ನೆಲಸಿ ಅಭಿವೃದ್ಧಿಯಾಗುವಂತೆ ತಮ್ಮ ಮನಸ್ಸಿಗೆ ತಾವು ಪಡೆದ ಫಲವನ್ನು ತಿಳಿಸುತ್ತಾರೆ.

ಹೀಗೆ ಮುಕ್ತಾಯಗೊಳ್ಳುವ ಈ ಕಾವ್ಯಕುಸುಮವು ಒಂದು ಉಪಯುಕ್ತ ಧರ್ಮಗ್ರಂಥವಾಗಿದ್ದರೂ, ಅಮುದನಾರ್‌ರವರ ಹಾಗೂ ರಾಮಾನುಜರ ಗುಣ ವಿಶೇಷಗಳನ್ನೂ ತಿಳಿಸುತ್ತದೆ. ಶ್ರೀರಂಗದಂತಹ ದೇವಾಲಯದ ಪ್ರಧಾನ ಅರ್ಚಕರೆಂದರೆ ಆ ಕಾಲದಲ್ಲಿ ಸಮಾಜದಲ್ಲಿನ ಹಿರಿದಾದ ಸ್ಥಾನವಿತ್ತು. ಇಂತಹ ಸ್ಥಾನ ವೈಭವ ಐಶ್ವರ್ಯಗಳ ನಡುವೆ ಓಲಾಡುತ್ತಿದ್ದ ಅಮುದನಾರ್‌ರವರು ಮೊದಲು ರಾಮಾನುಜರನ್ನು ಇಷ್ಟಪಡದೆ ಇದ್ದುದು ನಿಜವೆ. ಆದರೆ ನಂತರದಲ್ಲಿ ರಾಮಾನುಜರ ಹಿರಿಯಗುಣಗಳು, ವ್ಯಕ್ತಿತ್ವಗಳು ಅಮುದನಾರ್‌ರವರನ್ನು ಬಹಳಷ್ಟು ಆಕರ್ಷಿಸಿ, ಅವರ ಬಗ್ಗೆ ಹುಚ್ಚೇಳುವಂತೆ ಮಾಡಿ ಅವರ ದಾಸಾನುದಾಸರಾಗಿ ಅವರ ವಿನಯಪೂರ್ವಕ ಶಿಷ್ಯರಾದರು. ಯಾವ ದೇವಾಲಯದಲ್ಲಿ ಮಹಾರಾಜರಂತೆ ಮೆರೆದರೊ, ಅದೇ ದೇವಾಲಯದಲ್ಲಿ ಓರ್ವ ಸೇವಕನಂತೆ ನಡೆದುಕೊಂಡರು. ಇದು ಅಮುದನಾರ್‌ರವರ ಸಹೃದಯತೆ, ತಮ್ಮ ಗುರುಗಳ ಬಗ್ಗೆ ಇಟ್ಟ ಅಪಾರ ಪ್ರೀತಿ ಗೌರವಗಳನ್ನು ತೋರಿಸಿಕೊಡುತ್ತದೆ. ರಾಮಾನುಜ ನೂತ್ತಂದಾದಿಯಂತಹ ಕಾವ್ಯವನ್ನು ರಚಿಸಿದ ಅಮುದನಾರ್ (ಪೆರಿಯ ಕೋಯಿಲ್ ನಂಬಿಯ)ರವರೆ ಧನ್ಯರು.

ಈ ಕಾವ್ಯದಲ್ಲಿ ಕೆಲವೊಂದು ಭಾಗಗಳನ್ನು ತೆಗೆದು ಹಾಕಬೇಕೆಂದು ಶ್ರೀರಾಮಾನುಜರು ಹೇಳದೆ ಇದ್ದಿದ್ದರೆ, ಈ ಕಾವ್ಯದ ಪೂರ್ಣರೂಪ ನಮಗೆ ದೊರೆತಿದ್ದುದೇ ಆಗಿದ್ದರೆ ನಮಗೆ ಇನ್ನೂ ಎಷ್ಟೋ ವಿಷಯಗಳು ತಿಳಿದುಬರುತ್ತಿದ್ದವು. ★

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಕಿಶೋರ ಜಗತ್



## ದೇವರ್ಷಿಯ ಭೂದಾನ

ಬ್ರಹ್ಮಮಾನಸ ಪುತ್ರರಾದ ದೇವರ್ಷಿ ನಾರದರು, ಒಂದು ಪರ್ವದಿನ. ಸಾಗರ ಸ್ನಾನಕ್ಕಾಗಿ ಹೊರಟರು. ನಿರಂತರ ಹರಿ ನಾಮಸ್ಮರಣೆಯಲ್ಲೇ ಪರಮಸುಖ ಕಂಡ ಆ ಪೂಜ್ಯರು, ಮಹತೀವೀಣಾನಾದದಲ್ಲಿ ತಲ್ಲೀನರಾಗಿದ್ದರು. ಮುಗಿಲಿಂದ ಧರೆಗೆವ ತರಿಸುವ ಮಿಂಚಿನ ಗೊಂಚಲಂತೆ ತೇಜೋ ವ್ಯಕ್ತಿ ನಾರದರನ್ನು ಸಾಗರತೀರದಲ್ಲಿ ಸೇರಿದ್ದ ಮಹರ್ಷಿ ಸಮೂಹ, ದರ್ಶಿಸಿ ಧನ್ಯವಾಯ್ತು. ನಾರದರು ಅವರೆಲ್ಲರ ಯೋಗಕ್ಷೇಮವನ್ನು ವಿಚಾರಿಸುವ ನೆಪದಲ್ಲಿ, ಆ ಮುನಿವೃಂದ ಸೌರಾಷ್ಟ್ರದ ಕಡೆಯಿಂದ ಬಂದಿದೆಯೆಂದು ತಿಳಿದು ಸಂತೋಷಪಟ್ಟರು. ನಾರದರಿಗೆ ತಿಳಿಯದ ದೇಶವಿಲ್ಲ – ಅವರು ಪದಧೂಳಿ ಯಿಂದ ಪಾವನವಾಗದ ಲೋಕವಿಲ್ಲ. ಅವರಿಗೆ ಎಲ್ಲರೂ ಪರಿಚಿತರೇ. ಎಲ್ಲವೂ ಪರಿಚಿತವೇ. ಆತ ಸರ್ವಜ್ಞ.

"ಸೌರಾಷ್ಟ್ರಾಧಿಪತಿ ಧರ್ಮವರ್ಮ ಕ್ಷೇಮ ವಾಗಿದ್ದಾನೆಯೆ? ಆತ ಯಾವುದೊ ಒಂದು ಕಾರಣದಿಂದ ತಪಸ್ಸಾಚರಿಸುತ್ತಿದ್ದನಷ್ಟೆ. ಅದು ಸಫಲವಾಯ್ತೇ?" ನಾರದರು ಕೇಳಿ ದರು.

"ಹೌದು ಪೂಜ್ಯರೆ, ಅವರು ದಾನತತ್ತ್ವದ ರಹಸ್ಯವನ್ನರಿಯಲು ತಪಸ್ಸು ಮಾಡು ತ್ತಿದ್ದರು. ಅದು ಸಫಲವಾಯ್ತೆಂದು ಕೇಳಿ ದ್ದೇವೆ". ಮಹರ್ಷಿಗಳು ಹೇಳಿದರು.

"ಅದು ಹೇಗೆ?"

ಅನೇಕ ವರ್ಷಗಳ ನಂತರ, ತಪೋನಿರತ ಮಹಾರಾಜನಿಗೊಂದು ನಭೋವಾಣಿ ಕೇಳಿಸಿ ತಂತೆ–

ದ್ವಿಹೇತು ಷಡಧಿಷ್ಠಾನಂ
ಷಡಂಗಂ ಚ ದ್ವಿಪಾಕಯುಕ್ |
ಚತುಷ್ಪ್ರಕಾರಂ ತ್ರಿವಿಧಂ
ತ್ರಿನಾಶಂ ದಾನಮುಚ್ಯತೇ ||

ಎಂದು ಅಶರೀರವಾಣಿ ನುಡಿಯಿತಂತೆ.

"ಚೆನ್ನಾಗಿದೆ. ದಾನಕ್ಕೆ ಎರಡು ಕಾರಣ, ಆರು ಅಧಿಷ್ಠಾನ, ಆರು ಅಂಗ, ಎರಡು ಫಲ, ನಾಲ್ಕು ಪ್ರಕಾರ, ಮೂರು ಬೇರು, ಮೂರು ವಿನಾಶ ಸಾಧನಗಳು – ಎಲ್ಲ ಒಗಟಿ ನಂತಿದೆ."

ನಾರದರು ಹೇಳಿದರು.

"ಧರ್ಮವರ್ಮ ಈ ಶ್ಲೋಕಕ್ಕೆ ಪೂರ್ಣ ವಿವರಣೆ ಬೇಕೆಂದು ಪ್ರಾರ್ಥಿಸಿದರಂತೆ. ಆದರೆ ಅವರ ಇಷ್ಟಾರ್ಥ ನೆರವೇರಲಿಲ್ಲವಂತೆ"

"ಆಮೇಲೇನಾಯ್ತು?"

"ಮಹಾರಾಜರು ತಪಸ್ಸಿನಿಂದ ನಿವೃತ್ತ ರಾಗಿ ನಗರಕ್ಕೆ ಬಂದರು. ರಾಜ್ಯದಲ್ಲಿ ಡಂಗುರ ಹೊಡೆಸಿದರು. ಈ ಶ್ಲೋಕಕ್ಕೆ ಸೂಕ್ತವಾದ ಅರ್ಥವಿವರಣೆ ನೀಡುವ ಮೇಧಾವಿಗಳಿಗೆ ಐದುಲಕ್ಷ ದಿವ್ಯಾಲಂಕೃತ ಗೋವುಗಳು, ಅಷ್ಟೇ ಸಂಖ್ಯೆಯ ಸ್ವರ್ಣ ಮುದ್ರೆಗಳು ಮತ್ತು ಐದು ಗ್ರಾಮಗಳ ಜಹಗೀರು ನೀಡಲಾಗುತ್ತದೆ."

"ಯಾರಾದರೂ ತಿಳಿಸಿದರೇನು?"

"ಇಲ್ಲ ನಾರದರೆ, ಇದುವರೆಗೆ ಅಂತಹ ಮೇಧಾವಿ ಯಾರೂ ಬರಲಿಲ್ಲವೆಂದು ಜನ ರಾಡಿಕೊಳ್ಳುವುದನ್ನು ಕೇಳಿದ್ದೇವೆ. ನಭೋ ವಾಣಿಯ ರಹಸ್ಯವನ್ನು ಬಲ್ಲ ಮಹಾತ್ಮ ಯಾರೋ!! ಅದು ಎಲ್ಲರಿಗೂ ಅಷ್ಟು ಸುಲಭ ಗ್ರಾಹ್ಯ ವಸ್ತುವಲ್ಲ".

– ಮಹರ್ಷಿಗಳು ಹೇಳಿದರು.

ಸ್ನಾನಾಹ್ನಿಕಗಳನ್ನು ಮುಗಿಸಿಕೊಂಡು ನಾರದರು ಛದ್ಮವೇಷದಲ್ಲಿ ದೇವವರ್ಮನ ಅರಮನೆಗೆ ಬಿಜಯಮಾಡಿಸಿದರು ಮತ್ತು ನಭೋವಾಣಿ ನುಡಿದ ಶ್ಲೋಕಕ್ಕೆ ಪೂರ್ಣ ವಿವರಣೆ ನೀಡಲು ಸಿದ್ಧವಾಗಿದ್ದೇನೆಂದರು. ಮಹಾರಾಜ ಈ ಅಪರಿಚಿತ ವ್ಯಕ್ತಿಯಾಡಿದ ಮಾತಿಗೆ ಬೆರಗಾದ. ಹೀಗೆ ಹೇಳಿದವರೆಷ್ಟೋ ಮಂದಿ. ಆದರೆ ಯಾರ ಮಾತೂ ಸಮರ್ಪಕ ವಾಗಿರಲಿಲ್ಲವಾದ್ದರಿಂದ ಆತನಿಗೆ ನಂಬಿಕೆಯೂ ಬರಲಿಲ್ಲ. ಆದರೆ ಆ ವ್ಯಕ್ತಿಯ ನಯನ ದೀಪ್ತಿ, ವ್ಯಕ್ತಿತ್ವದ ಗಾಂಭೀರ್ಯ; ಧ್ವನಿಯ ಪ್ರಖರತೆ,... ನೋಡಿದಾಗ ಯಾರಿಗಾದರೂ ನಂಬಿಕೆ ಬರುವಂತಿತ್ತು. ದೇವವರ್ಮ ಆತ ನನ್ನು ಭಕ್ತಿಯಿಂದ ಗೌರವಿಸಿದ, ಸತ್ಕರಿಸಿದ.

ಶ್ಲೋಕದ ಅರ್ಥ ಅಪ್ಪಣೆಯಾಗ ಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥಿ ಸಿದ. ಮಹಾರಾಜನನ್ನು ಕುರಿತು ಆ ಮಹಾತ್ಮ ಹೇಳಿದ—

ದಾನಕ್ಕೆರಡು ಕಾರಣವಿದೆ. ಶ್ರದ್ಧೆ ಮತ್ತು ಶಕ್ತಿ. ಏಕೆಂದರೆ ಸ್ವಧರ್ಮನಿಷ್ಠ ನ್ಯಾಯೋಪಾರ್ಜಿತ ವಸ್ತುವಿನ ದಾನವೇ ಶ್ರೇಯಸ್ಕರ – ಅದೆಷ್ಟೇ ಅಲ್ಪವಾಗಿದ್ದರೂ

**ವಿದ್ವಾನ್ ಬ. ನ. ಗುಂಡೂರಾವ್**

ಸಹ. ಧರ್ಮ, ಅರ್ಥ, ಕಾಮ, ಲಜ್ಜ, ಹರ್ಷ, ಭಯ – ಈ ಆರು ದಾನದ ಅಧಿಷ್ಠಾನಗಳು, ದಾನಕೊಡುವಾತ, ತೆಗೆದುಕೊಳ್ಳುವಾತ, ಶುದ್ಧಿ, ಧರ್ಮ ಯುಕ್ತ ದೇಯವಸ್ತು, ದೇಶ, ಕಾಲ – ಈ ಆರು ದಾನದ ಅಂಗಗಳು, ಇಹ–ಪರ ಸೌಖ್ಯ– ಇವೆರಡು ಫಲಗಳು. ಧ್ರುವ, ತ್ರಿಕ, ಕಾಮ್ಯ, ನೈಮಿತ್ತಿಕ, ಈ ನಾಲ್ಕು ಪ್ರಕಾರಗಳು;...

"ಧ್ರುವ–ಎಂದರೇನು ಮಹಾತ್ಮ?"

ರಾಜ ಪ್ರಶ್ನಿಸಿದ.

ವಾಪೀಕೂಪತಟಾಕಾದಿ ಜಲಾಶಯಗಳ ನಿರ್ಮಾಣ–ಶಾಶ್ವತವಾಗಿ ಫಲನೀಡುವ ಗಿಡ ಮರಗಳನ್ನು ನೆಟ್ಟು ಪೋಷಿಸುವುದು ... ಇವೆಲ್ಲ ಧ್ರುವ. ನಿತ್ಯವೂ ಏನಾದರೂ ದಾನ ಮಾಡುವುದು ತ್ರಿಕವೆನಿಸಿಕೊಳ್ಳುತ್ತದೆ. ಪತ್ನಿ–ಮಕ್ಕಳು ಮುಂತಾದವರ ಕ್ಷೇಮ ಕ್ಕಾಗಿ ಮತ್ತು ಚಿಂತಿತಮನೋರಥ ಪ್ರಾಪ್ತಿ ಗಾಗಿ ಮಾಡುವ ದಾನ ಕಾಮ್ಯವೆನಿಸಿಕೊಳ್ಳು ತ್ತದೆ. ಗ್ರಹಣ ಮುಂತಾದ ಪರ್ವದಿನಗಳಲ್ಲಿ ಮಾಡುವ ದಾನಕ್ಕೆ ನೈಮಿತ್ತಿಕವೆಂದು ಹೆಸರು. ಉತ್ತಮ, ಮಧ್ಯಮ, ಕನಿಷ್ಠ– ಇವು ದಾನದಲ್ಲಿರುವ ಮೂರು ಭೇದಗಳು, ದಾನ ಮಾಡಿದ ನಂತರ ವ್ಯಥೆ ಪಡುವಿಕೆ, ಅಪಾತ್ರರಿಗೆ ದಾನಮಾಡುವಿಕೆ, ಶ್ರದ್ಧೆ ಯಿಲ್ಲದೆ ಕೊಡುವಿಕೆ – ಈ ಮೂರೂ ದಾನ ನಾಶಕ ಕಾರಣಗಳು.

ಈಗ ಅರ್ಥವಾಯ್ತೇ – ಮಹಾರಾಜ – ನಭೋವಾಣಿಯ ದಿವ್ಯಶ್ಲೋಕದ ಪೂರ್ಣ ವಿವರಣೆ?

ಮಹಾತ್ಮರ ಮಾತಿಗೆ ಮಹಾರಾಜ ಬೆಕ್ಕಸ ಬೆರಗಾಗಿಹೋದ.

"ಬಹುಕಾಲದಿಂದ ನನ್ನನ್ನು ಕಾಡುತ್ತಿದ್ದ ಯೋಜನೆ ತಮ್ಮ ಕೃಪೆಯಿಂದ ಬಗೆ ಹರಿಯಿತು. ತಾವು ಯಾರೆಂದು ಸ್ಪಷ್ಟಪಡಿ ಸೋಣವಾಗಬೇಕು."

ಮಹಾರಾಜ ಅನುನಯದ ವಾಣಿಯಲ್ಲಿ ಕೇಳಿದ.

"ಧರ್ಮವರ್ಮ! ನಾನು ನಾರದ. ನೀನು ಪ್ರಚಾರಪಡಿಸಿದ ಪ್ರಕಾರ ಏನೇನು ಬಹು ಮಾನ ನೀಡಬೇಕಾಗಿದೆಯೆಂಬುದು ನೆನಪಿದೆ ಯಷ್ಟೆ? ಆ ವಸ್ತುಗಳೆಲ್ಲ ನಿನ್ನಲ್ಲೇ ಇರಲಿ. ಬೇಕಾದಾಗ ತೆಗೆದುಕೊಳ್ಳುತ್ತೇನೆ. ನಾನು ಕೂಡಲೇ ರೈವತಕ ಪರ್ವತಕ್ಕೆ ಹೋಗ ಬೇಕಾಗಿದೆ; ನಿನಗೆ ಶುಭವಾಗಲಿ".

ಮಹಾರಾಜ ಅವರನ್ನು ಸಮುಚಿತ ರೀತಿ ಯಲ್ಲಿ ಸತ್ಕರಿಸಿ ಬೀಳ್ಕೊಟ್ಟ. ರೈವತಕ ಪರ್ವತದಲ್ಲಿ ನಾರದರಿಗೊಂದು ಯೋಜನೆ ಬಂತು. ಅಮೂಲ್ಯ ವಸ್ತುಗಳು ದಾನವಾಗಿ ಬಂದಿವೆ. ಜಹಗೀರಾಗಿ ಭೂಮಿ ಬಂದಿದೆ. ಆದರೆ ಈ ವಸ್ತುಗಳು ಹರಿಸ್ಮರಣೆಯನ್ನು ಮರೆಸಲು ಸಾಕಷ್ಟು ಸಾಮರ್ಥ್ಯ ಪಡೆದಿವೆ. ಭೋಗ ಪದಾರ್ಥಗಳು ಶ್ರದ್ಧಾ ಭಕ್ತಿಗಳನ್ನು ಸಡಿಲಗೊಳಿಸುತ್ತವೆಂದು ಹೇಳುತ್ತಾರೆ. ಮೇಲಾಗಿ ನನಗೇಕೆ ಈ ಸಾಮಗ್ರಿಗಳು? ಎಂದಾದರೂ ಯಾರಾದರೂ ಸತ್ಪಾತ್ರರು ಸಿಕ್ಕಿದರೆ ಇದೆಲ್ಲ ಅವರಿಗೆ ನೀಡಿ ಕೈತೊಳೆದು ಕೊಳ್ಳುವುದು ಕ್ಷೇಮಕರ. ಕೆಲವು ಪ್ರಶ್ನೆ ಗಳಿಗೆ ಉತ್ತರಕೊಟ್ಟದ್ದರಿಂದ ನನಗೀ ವಸ್ತು ಗಳು ಸಿಕ್ಕಿದವು. ನನ್ನ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಟ್ಟವರಿಗೆ ನಾನು ದಾನಮಾಡಿ ಬಿಟ್ಟರಾಯ್ತು–ಎಂದು ಯೋಚಿಸಿದ ನಾರ ದರು ಕೆಲವು ಪ್ರಶ್ನೆಗಳನ್ನು ತಯಾರಿಸಿದರು. ಉತ್ತರ ಹೇಳುವ ಸಮರ್ಥರನ್ನು ಹುಡು ಕುತ್ತ ಅಲ್ಲಲ್ಲಿ ಸುತ್ತ ತೊಡಗಿದರು.

ನಾರದರು ತಯಾರಿಸಿದ ಪ್ರಶ್ನಪತ್ರಿಕೆ ವಿಚಿತ್ರವೂ ಹೌದು, ಮಹತ್ವ ಪೂರ್ಣವೂ ಹೌದು. ಮಾತೃಕಾ ಎಂದರೇನು? ಇಪ್ಪ ತ್ತೈದು ವಸ್ತುಗಳಿಂದ ನಿರ್ಮಿತವಾದ ಮನೆ ಯಾವುದು? ಅನೇಕ ರೂಪವುಳ್ಳ ಸ್ತ್ರೀಯನ್ನು ಒಂದೇ ರೂಪದ ವ್ಯಕ್ತಿ ಯಾಗಿ ಮಾಡುವವರಾರು? ಸಾಗರದಲ್ಲಿರ ಬಹುದಾದ ಅತ್ಯಂತ ದೊಡ್ಡ ಜಲಚರ ಪ್ರಾಣಿ ಯಾವುದು? ಎಂಟು ಬಗೆಯ ಬ್ರಾಹ್ಮಣರು ಯಾರು? ಕೃತತ್ರೇತಾದಿ ನಾಲ್ಕು ಯುಗಗಳು ಪ್ರಾರಂಭವಾಗುವ ದಿನಗಳಾವುವು? ಹದಿನಾಲ್ಕು ಮನ್ವಂತರ ಗಳು ಪ್ರಾರಂಭವಾದ ದಿನಗಳಾವುವು? ಸೂರ್ಯನು ತನ್ನ ದಿವ್ಯರಥದಲ್ಲಿ ಕುಳಿತ ಪ್ರಥಮದಿನ ಯಾವುದು? ಕಾಳಸರ್ಪದಂತೆ ಜನಗಳನ್ನು ತೊಂದರೆ ಪಡಿಸುವ ವ್ಯಕ್ತಿ ಯಾರು? ಪ್ರಪಂಚದಲ್ಲಿ ಅತ್ಯಂತ ಚತುರ ನಾರು? ಎರಡು ಮಾರ್ಗಗಳು ಎಂದರೇನು? ಅವು ಯಾವುವು?

ಈ ವಿಚಿತ್ರ ಪ್ರಶ್ನಾವಳಿಯನ್ನು ಹಿಡಿದು ನಾರದರು ಎಲ್ಲೆಲ್ಲೋ ಸುತ್ತಿದರು. ಅವರಿಗೆ ಸೂಕ್ತವಾಗಿ ಉತ್ತರ ಹೇಳುವಾತ ದೊರೆಯಲಿಲ್ಲ. ಅವರ ತಲೆಕೆಟ್ಟಿತು. ಹೀಗೇ ಯೋಚನೆಮಾಡುವಾಗ ಆತನಿಗೆ ಒಂದು ವಿಷಯ ಹೊಳೆಯಿತು. ಕಲಾಪ ಎಂಬ ಒಂದು ನಗರವಿದೆ. ಅಲ್ಲಿ ಎಂಭತ್ನಾಲ್ಕು ಸಹಸ್ರ ವಿದ್ವಾಂಸರು ಇರುವರಂತೆ. ಅವ ರೆಲ್ಲರೂ ಮಹಾ ತಪಸ್ವಿಗಳಂತೆ. ಅವರಲ್ಲಿ ದೇವಾಪಿ ಮತ್ತು ಮರುತ್ ಎಂಬಿಬ್ಬರು ಮಹಾನ್ ಮೇಧಾವಿಗಳಂತೆ. ಬಹುಶಃ ಈ ಪ್ರಶ್ನೆಗಳಿಗೆ ಸೂಕ್ತಸಮಾಧಾನವನ್ನು ಅವರು ಖಂಡಿತ ಹೇಳಬಲ್ಲರು – ಎಂದು ಭಾವಿಸಿ ನಾರದರು ಕಲಾಪಕ್ಕೆ ಹೊರಟರು. ಆ ವಿದ್ವನ್ಮಂಡಲಿಯನ್ನು ಕಂಡು ತಾವು ಬಂದ ಉದ್ದೇಶವನ್ನು ತಿಳಿಸಿದರು. ದೇವರ್ಷಿಯ ಮಾತು ಕೇಳಿ ಅವರೆಲ್ಲ ಗಹ ಗಹಿಸಿ ನಕ್ಕರು. ಈ ಊರಿನಲ್ಲಿರುವ ಹುಡುಗರು ಈ ಪ್ರಶ್ನೆಗಳಿಗೆ ಉತ್ತರ ಹೇಳು ತ್ತಾರೆಂದು ಹಾಸ್ಯಮಿಶ್ರಿತ ತಾತ್ಸಾರದ ಧ್ವನಿಯಲ್ಲಿ ಮಾತಾಡಿದರು. ನಾರದರು ಕ್ಷಣ ಕಾಲ ಬೆಪ್ಪಾದರು. ಆ ನಗರದಲ್ಲಿ ಸುತನು ಎಂಬ ಒಬ್ಬ ಹುಡುಗನಿದ್ದ. ಅವನು ವಯಸ್ಸು – ತಿಳಿವಳಿಕೆ ಎರಡರಲ್ಲೂ ಚಿಕ್ಕವನು. ನಾರದರ ಪ್ರಶ್ನಾವಳಿ ಕೇಳಿ ಅವನೂ ಹಾಸ್ಯ ಮಾಡಿದ. "ಇವು ಬಾಲೋಚಿತವಾದ ಪ್ರಶ್ನೆಗಳು. ಇದನ್ನು ತಾವು ಈ ಊರಿನಲ್ಲಿ ಪ್ರಸ್ತಾಪಮಾಡಿದ್ದೇ ಅನುಚಿತ. ಆದರೆ, ತಾವು ದೇವರ್ಷಿಗಳು ಕೇಳಿ ದ್ದೀರಿ. ಆ ಗೌರವಕ್ಕಾಗಿ ಉತ್ತರ ಹೇಳು ತ್ತೇನೆ" – ಎಂದ – ಸುತನು – ದಿಟ್ಟವಾಗಿ. ನಾರದರು ತಮ್ಮ ಪ್ರಶ್ನೆಗಳನ್ನು ಕೇಳುವಾಗ

(32 ನೇ ಪುಟ ನೋಡಿ)

# ಈಶಾವಾಸ್ಯ– ಒಂದು ಪರಿಚಯ

ಭಾರತೀಯ ತತ್ತ್ವಶಾಸ್ತ್ರದಲ್ಲಿ ವೇದಗಳು ವಿರಾಟ್ ಹಿಮಾಲಯ ಪಂಕ್ತಿಯನ್ನು ಹೋಲುವಂತಿದ್ದರೆ, ಉಪನಿಷತ್ತುಗಳು ಇವುಗಳನು ಆಧರಿಸಿ ನಿಂತಿರುವ ತುಷಾರಹಾರವನ್ನು ಧರಿಸಿರುವ ಶಿಖರಗಳನ್ನು ಹೋಲುತ್ತಿವೆ. ಈ ಉಪನಿಷತ್ತುಗಳು ಮಾನವ ಮರ್ತ್ಯಲೋಕದಿಂದ ಅಮೃತತ್ವಕ್ಕೆ ಹೋಗಲು ನಿರ್ಮಿಸಿರುವ ಏಣಿಗಳಾಗಿವೆ. ಉಪನಿಷತ್ತುಗಳು ತಾತ್ತ್ವಿಕ ವಿಷಯಗಳಿಂದ ಕೂಡಿವೆ. ಬ್ರಹ್ಮ, ಜೀವ, ಜಗತ್ತುಗಳ ನಡುವಣ ಪರಸ್ಪರ ಸಂಬಂಧಗಳನ್ನು ಇವುಗಳಲ್ಲಿ ವಿವರಿಸಲಾಗಿದೆ. ಪ್ರಸ್ಥಾನತ್ರಯದಲ್ಲಿ ಉಪನಿಷತ್ತು ಬಹುಮುಖ್ಯ ಅಂಗವಾಗಿದೆ. ಇವು ಹಲವಾರು ಇವೆಯಾದರೂ ಇವುಗಳಲ್ಲಿ ಹತ್ತು ಮಾತ್ರ ಮುಖ್ಯವಾದವು. ಹಿಂದೂಗಳ ತತ್ತ್ವಸಿದ್ಧಾಂತಕ್ಕೆಲ್ಲ 'ವಜ್ರತಳಹದಿ'ಯಂತಿರುವ ಉಪನಿಷತ್ತುಗಳಲ್ಲಿ ಅತಿಮುಖ್ಯವಾದದ್ದೆಂದರೆ 'ಈಶಾವಾಸ್ಯೋಪನಿಷತ್ತು'. ಶುಕ್ಲಯಜುರ್ವೇದದ ವಾಜಸನೇಯ ಸಂಹಿತೆಯ ನಲವತ್ತನೆ ಅಧ್ಯಾಯಕ್ಕೆ ಸೇರಿದ ಇದರಲ್ಲಿ ಒಟ್ಟು ಹದಿನೆಂಟು ಮಂತ್ರಗಳು ಮಾತ್ರ ಇವೆ. ಗಾತ್ರದಲ್ಲಿ ಕಿರಿದಾದದ್ದಾದರೂ ಪಾತ್ರದಲ್ಲಿ ಹಿರಿದಾಗಿರುವ ಈ ಉಪನಿಷತ್ತಿನ ಮೇಲೆ ಶಂಕರಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ರಾಮಾನುಜಾಚಾರ್ಯರು ತಮ್ಮ ವೇದಾರ್ಥ ಸಂಗ್ರಹದಲ್ಲಿ ಇದನ್ನು ಕುರಿತು ಚರ್ಚೆ ಮಾಡಿದ್ದಾರೆ. ಮಧ್ವಾಚಾರ್ಯರು ಇದರ ಬಗ್ಗೆ ವ್ಯಾಖ್ಯಾನ ಬರೆದಿರುತ್ತಾರೆ.

ವೇದಾಂತ ದರ್ಶನದ ಸಾರವನ್ನು ವಿವೇಚಿಸುವ ಈ ಉಪನಿಷತ್ತಿನಲ್ಲಿ ಕರ್ಮ – ಜ್ಞಾನಗಳ ಸಮುಚಿತ ವರ್ಣನೆಯಿದೆ. ಈ ಉಪನಿಷತ್ತು ಕರ್ಮಕಾಂಡದ ಕೊನೆಯಲ್ಲಿರುವುದರಿಂದ ಕರ್ಮಕ್ಕೆ ಸಂಬಂಧಪಟ್ಟಿರುವ ಜ್ಞಾನವನ್ನು ಹೇಳುತ್ತದೆಯೆಂದೂ, ಇದರ ಹನ್ನೊಂದನೆಯ ಮಂತ್ರದಲ್ಲಿ ಜ್ಞಾನಕರ್ಮ ಸಮುಚ್ಚಯವನ್ನು ಹೇಳಿದೆಯೆಂದೂ, ಹದಿನಾಲ್ಕನೆಯ ಮಂತ್ರದಲ್ಲಿ ಪರಿಣಾಮವಾದವನ್ನು ಹೇಳಿದೆಯೆಂದೂ, ದ್ವೈತಾದ್ವೈತ ಮತದವರಾದ ಭರ್ತೃಪ್ರಪಂಚ, ಭಾಸ್ಕರಾಚಾರ್ಯ ಮೊದಲಾದವರು ಅಭಿಪ್ರಾಯ ಪಡುತ್ತಾರೆ.

'ಈಶಾವಾಸ್ಯ ಮಿದಂ ಸರ್ವಂ' ಎಂದು ಪ್ರಾರಂಭವಾಗುವ ಇದರ ಮೊದಲನೆಯ ಮಂತ್ರವು ಅದ್ವೈತ ಸ್ವರೂಪದ ನಿರೂಪಣೆಯಿಂದ ಕೂಡಿದೆ. ಈಶನೆಂದರೆ ಪರಮೇಶ್ವರ. ಇಂತಹ ಈಶ್ವರನಿಂದ ದತ್ತವಾದ ತ್ಯಾಗದಿಂದ ನಿನ್ನನ್ನು ಕಾಪಾಡಿಕೊ ಎಂಬ ಮಹೋನ್ನತವಾದ ಭಾವನೆಯೂ ಇದರ ಹಿನ್ನೆಲೆಯಲ್ಲಿ ಅಡಕವಾಗಿದೆ. ಎಂದರೆ ಇದರ ಅರ್ಥ ಯಾರ ಧನವನ್ನೂ ಬಯಸಬೇಡ ಎಂಬುದೇ ಆಗಿದೆ.

ಆತ್ಮನನ್ನು ಅರಿತುಕೊಳ್ಳಲು ಶಕ್ತಿಯಿಲ್ಲದವನಿಗೆ 'ಕುರ್ವನ್ನೇಹ ಕರ್ಮಾಣಿ ......' ಎಂಬ ಎರಡನೆಯ ಮಂತ್ರವು ಕರ್ಮನಿಷ್ಠೆಯನ್ನು ಉಪದೇಶಿಸುತ್ತದೆ. ಅಗ್ನಿಹೋತ್ರವೇ ಮುಂತಾದ ಕರ್ಮಗಳನ್ನು ಮಾಡುತ್ತಾ ಈ ಲೋಕದಲ್ಲಿ ನೂರು ವರ್ಷಗಳವರೆಗೆ ಬಾಳುವುದಕ್ಕೆ ಇಚ್ಛಿಸಬೇಕಂತೆ. ಯಜ್ಞಗಳಲ್ಲಿ ಐದು ವಿಧಗಳಿವೆ–ದೇವಯಜ್ಞ, ಋಷಿಯಜ್ಞ, ಪಿತೃಯಜ್ಞ, ಮನುಷ್ಯಯಜ್ಞ, ಭೂತಯಜ್ಞಗಳೆಂದು. ಯಜ್ಞದೃಷ್ಟಿಯನ್ನು ಮರೆತ ಬಾಳು ವ್ಯರ್ಥದ ಬಾಳು; ಇದನ್ನು ಬಿಡಿ ಎಂದು ಇಲ್ಲಿ ಹೇಳಲಾಗಿದೆ. ಮೂರನೆಯ ಮಂತ್ರ ಅಜ್ಞಾನಿಗಳನ್ನು ಕುರಿತ ನಿಂದೆಯಾಗಿದೆ. ತದನಂತರ ಐದು ಮಂತ್ರಗಳಲ್ಲಿ ಆತ್ಮದ ಸ್ವರೂಪ, ಸರ್ವ ಭೂತಗಳಲ್ಲಿರುವ ಆತ್ಮದ ಏಕ ಸ್ವಭಾವ, ಆತ್ಮ ಸ್ಥಿತಿಯನ್ನರಿತವರ ಶೋಕ ದುಃಖ, ದೂರತೆಗಳು ವ್ಯಾವೃತವಾಗಿವೆ.

ಮುಂದಿನ ಮೂರು ಮಂತ್ರಗಳು ಒಂದು ಗುಂಪಿಗೆ ಸೇರುತ್ತವೆ. ಇವುಗಳಲ್ಲಿ ವಿದ್ಯೆ ಮತ್ತು ಅವಿದ್ಯೆಗಳನ್ನು ಕುರಿತು ಹೇಳಲಾಗಿದೆ. ಅವಿದ್ಯೆಯೆಂದರೆ ಅಗ್ನಿಹೋತ್ರಾದಿ ವೈದಿಕ ಕರ್ಮಗಳು. ವಿದ್ಯೆಯೆಂದರೆ ಕರ್ಮವಿಹೀನವಾದ ದೇವತಾ ವಿಷಯಕ ಜ್ಞಾನ. ಅವಿದ್ಯೋಪಾಸನೆಯ ಮೂಲಕ ಪಿತೃಲೋಕವನ್ನೂ ವಿದ್ಯೋಪಾಸನೆಯ ಮೂಲಕ ದೇವಲೋಕವನ್ನು ಕರ್ಮೋಪಾಸಕರು ಸೇರುತ್ತಾರೆ. ವಿದ್ಯೆಯಿಂದ ಬ್ರಹ್ಮನ ಸ್ವಭಾವವೇನು, ಹೊರಗಿನ, ಜಗತ್ತಿನ ಸ್ವಭಾವವೇನು, ಜೀವರ ಸ್ವಭಾವವೇನೆಂದು ಗೊತ್ತಾಗುತ್ತದೆ. ಅವಿದ್ಯೆ ಅಲ್ಪಜ್ಞಾನವನ್ನು ಕುರಿತು ಹೇಳಿದ್ದಾಗಿದೆ. ಅಪೇಕ್ಷಿತವಾದ ಅಮೃತತ್ತ್ವವನ್ನು ಪಡೆಯಲು ಕರ್ಮಜ್ಞಾನಗಳ ಸಮುಚ್ಚಯದಿಂದ ಸಾಧ್ಯವಾದೀತು.

ಎರಡನೆಯ ಗುಂಪಿಗೆ ಸೇರಿದ ಮೂರು ಮಂತ್ರಗಳನ್ನು ಉಪನಿಷತ್ತಿನಲ್ಲಿ ಮುಂದೆ ಗಮನಿಸಬಹುದು. ಇಲ್ಲಿ ಅಸಂಭೂತಿ ಮತ್ತು ಸಂಭೂತಿಗಳನ್ನು ಹೇಳಲಾಗಿದೆ. ಸಂಭೂತಿಯೆಂದರೆ ಹಿರಣ್ಯಗರ್ಭನೆಂಬ ಕಾರ್ಯಬ್ರಹ್ಮ. ಅಸಂಭೂತಿಯೆಂಬುದು ಅವ್ಯಾಕೃತವೆಂಬ ಹೆಸರಿನ ಪ್ರಕೃತಿಯಾಗಿದೆ. ಅಸಂಭೂತಿಯ ಉಪಾಸಕರು ಕುರುಡುಗತ್ತಲೆಯನ್ನು ಸೇರಿದರೆ, ಸಂಭೂತಿಯ ಉಪಾಸಕರು ಅದಕ್ಕಿಂತ ಹೆಚ್ಚಿನ ಕತ್ತಲೆಯನ್ನು ಸೇರುವರು. ಅಸಂಭೂತಿಯ ಫಲ ಪ್ರಕೃತಿಯಲ್ಲಿ ಲಯವನ್ನು ಹೊಂದುವುದಾದರೆ, ಸಂಭೂತಿಯ ಫಲವು ಅಣಿಮಾದಿ ಐಶ್ವರ್ಯಾದಿಗಳನ್ನು ಗಳಿಸಿಕೊಡುವುದಾಗಿದೆ.

ಉಪನಿಷತ್ತಿನ ಕಡೆಯ ಭಾಗವಾಗಿ ನಾಲ್ಕು ಮಂತ್ರಗಳನ್ನು ನೋಡಬಹುದು. ಮರಣಕಾಲ ಒದಗಿದಾಗ ಉಪಾಸಕ ಮಾಡಬೇಕಾದ ಪ್ರಾರ್ಥನೆಯೂ ಇದಾಗಿದೆ. ಹೇ 'ಪೂಷನ್', ಜ್ಯೋತಿರ್ಮಯವಾದ ಮುಚ್ಚಳದಿಂದ ಸತ್ಯದ ಮುಖವು ಮುಚ್ಚಲ್ಪಟ್ಟಿದೆ. ಸತ್ಯಧರ್ಮನಾದ ನನಗೆ ಸತ್ಯವು ಕಾಣುವಂತೆ ಅದನ್ನು ತೆಗೆದು ಹಾಕು' ಜಗತ್ತನ್ನು ಪೋಷಿಸುವುದರಿಂದ ಸೂರ್ಯನಿಗೆ ಪೂಷಾ ಎಂಬ ಹೆಸರು ಬಂದಿದೆ. ಸತ್ಯಬ್ರಹ್ಮನನ್ನು ಉಪಾಸನೆ ಮಾಡುವ ಧರ್ಮವುಳ್ಳವನು ಸತ್ಯಧರ್ಮನು. ಉಪಾಸಕನು ಸೂರ್ಯನನ್ನು ಕುರಿತು "ಸೂರ್ಯನೇ, ಪ್ರಜಾಪತ್ಯನೇ, ನಿನ್ನ ರಶ್ಮಿಗಳನ್ನು ತೆಗೆ. ನಿನ್ನ ತೇಜಸನ್ನು ಹಿಂತೆಗೆದುಕೊ ನಿನ್ನ ಕಲ್ಯಾಣ ತಮವಾದ ರೂಪವು ಯಾವುದೋ ಅದನ್ನು ನಿನ್ನ ಅನುಗ್ರಹದಿಂದ ನೋಡುತ್ತೇನೆ" ಎಂಬುದಾಗಿ ಕೇಳುತ್ತಿದ್ದಾನೆ.

ಅಂತಿಮ ಕಾಲದಲ್ಲಿ ಉಂಟಾಗುವ ಸ್ಮೃತಿಯು ಜೀವಾತ್ಮನ ಭವಿಷ್ಯವನ್ನು ನಿರ್ಧರಿಸುತ್ತದೆ. ಆದ್ದರಿಂದ ಅವಸಾನಕಾಲ ಒದಗಿದಾಗ ಮನಸ್ಸು ಸದ್ಭಾವನೆಗಳ ಕಡೆಗೆ ಹೋಗುವಂತೆ ಪ್ರಯತ್ನಿಸಬೇಕು. ಇದನ್ನೇ ಗೀತೆಯಲ್ಲಿ ಭಗವಂತನು 'ಮರಣ ಕಾಲದಲ್ಲಿ ಯಾವ ಭಾವವನ್ನಾದರೂ ಸ್ಮರಿಸುತ್ತಾ ದೇಹವನ್ನು ಬಿಡುವನೋ ಅವನು ಆ ಭಾವವನ್ನೇ ಹೊಂದುವನು'–ಎಂದು ಹೇಳಿರುವುದು.

"ಹೇ, ಅಗ್ನಿ, ಕರ್ಮಫಲದ ಭೋಗಕ್ಕಾಗಿ ನಮ್ಮನ್ನು ಒಳ್ಳೆಯ ಮಾರ್ಗದಲ್ಲಿ ಕರೆದುಕೊಂಡು ಹೋಗು. ನಮ್ಮ ಕುಟಿಲವಾದ ಪಾಪವನ್ನು ನಾಶ ಮಾಡು. ನಿನಗೆ ಪುನಃ ಪುನಃ ನಮಸ್ಕಾರವಚನ

ಶ್ರೀ ಕೆ. ಆರ್. ನರಸಿಂಹ

(30ನೇ ಪುಟದಿಂದ)

ಅವರ ಮುಖದಲ್ಲಿ ಆಶ್ಚರ್ಯವಿತ್ತು ; ಧ್ವನಿಯಲ್ಲಿ ಸಂಕೋಚವಿತ್ತು.

ಸುತನು ಗಂಭೀರವಾಗಿ ಉತ್ತರ ಹೇಳತೊಡಗಿದ – ಯಾವುದೇ ಭಾಷೆಯಾಗಲೀ ಅದಕ್ಕೆ ವರ್ಣಮಾಲೆ ಇರುತ್ತದೆ ಸಾಮಾನ್ಯವಾಗಿ – ಈ ವರ್ಣಮಾಲೆಯನ್ನೇ ಅಕ್ಷರಗಳನ್ನೇ ಮಾತೃಕಾ ಎನ್ನುವುದು, 25 ವಸ್ತುಗಳಿಂದ ತಯಾರಾದ ಮನೆ ಮಾನವದೇಹ. ಅನೇಕ ರೂಪಗಳುಳ್ಳದ್ದು ಸ್ತ್ರೀ ಬುದ್ಧಿ. ಅದನ್ನು ಏಕರೂಪಕ್ಕೆ ತರುವ ಶಕ್ತಿ ಧರ್ಮಕ್ಕಿದೆ. ಅತ್ಯಂತ ರೋಚಕ ಕಥೆಯನ್ನು ರಚಿಸುವಾತ ಮಹಾಪಂಡಿತ. ಈ ಜಗತ್ತನ್ನು ಸಾಗರವೆಂದು ಭಾವಿಸಿದಾಗ, ಆ ಸಾಗರದಲ್ಲಿರಬಹುದಾದ ಅತ್ಯಂತ ದೊಡ್ಡ ಜಲಚರ ಪ್ರಾಣಿ– ಗ್ರಾಹ–ಮೊಸಳೆ–ಲೋಭ ಬುದ್ಧಿ ಮಾತ್ರ. ಬ್ರಾಹ್ಮಣ, ಶ್ರೋತ್ರಿಯ, ಅನೂಚಾನ, ಭ್ರೂಣ, ಋಷಿಕಲ್ಪ–ಋಷಿ, ಮುನಿ – ಈ ಎಂಟು ಬಗೆಯ ಜನ ಬ್ರಾಹ್ಮಣರೆನಿಸಿಕೊಳ್ಳುತ್ತಾರೆ. ಕೃತಯುಗವು ಕಾರ್ತಿಕ ಶುದ್ಧ ನವಮಿಯಂದು, ತ್ರೇತೆಯು ವೈಶಾಖ ಶುದ್ಧ ತದಿಗೆಯಂದು, ದ್ವಾಪರವು ಮಾಘ ಬಹುಳ ಅಮಾವಾಸ್ಯೆಯಂದು, ಕಲಿಯುಗವು ಭಾದ್ರಪದ ಬಹುಳ ತ್ರಯೋದಶಿಯಂದು ಪ್ರಾರಂಭವಾಗಿವೆ. ವಸ್ತುತಃ ಈ ದಿನಗಳೇ ಯುಗಾದಿ. ಸ್ವಾಯಂಭುವಾದಿ ಹದಿನಾಲ್ಕು ಮನ್ವಂತರಗಳು ಕ್ರಮವಾಗಿ ಪ್ರಾರಂಭವಾದದ್ದು ಈ ದಿನಗಳಲ್ಲಿ – ಅಶ್ವೀಜಶುದ್ಧ ನವಮಿ, ಕಾರ್ತೀಕಶುದ್ಧ ದ್ವಾದಶಿ, ಚೈತ್ರ ಶುದ್ಧ ತದಿಗೆ, ಭಾದ್ರಪದಶುದ್ಧ ತದಿಗೆ, ಫಾಲ್ಗುಣ ಬಹುಳ ಅಮಾವಾಸ್ಯೆ, ಪುಷ್ಯ ಶುದ್ಧ ಏಕಾದಶಿ, ಆಷಾಢ ಶುದ್ಧ ದಶಮಿ, ಮಾಘಶುದ್ಧ ಸಪ್ತಮಿ. ಶ್ರಾವಣ ಬಹುಳ ಅಷ್ಟಮಿ, ಆಷಾಢಶುದ್ಧ ಪೂರ್ಣಿಮೆ, ಕಾರ್ತೀಕಶುದ್ಧ ಪೂರ್ಣಿಮೆ, ಫಾಲ್ಗುಣ ಶುದ್ಧ ಹುಣ್ಣಿಮೆ, ಚೈತ್ರಶುದ್ಧ ಹುಣ್ಣಿಮೆ, ಜ್ಯೇಷ್ಠ ಶುದ್ಧ ಹುಣ್ಣಿಮೆ. ಭಗವಾನ್ ಭಾಸ್ಕರನು ಪ್ರಪ್ರಥಮವಾಗಿ ರಥವೇರಿದ್ದು ಮಾಘಶುದ್ಧ ಸಪ್ತಮಿಯ ದಿನ. ಕಾಳಸರ್ಪದಂತೆ ಜನರನ್ನು ಸತಾಯಿಸುವವನು ಕಲಿಯುಗದ ರಾಜಕೀಯ ಭಾಷಣಕಾರ. ಜಗತ್ತಿನಲ್ಲಿ ಅತ್ಯಂತ ಚತುರ ವ್ಯಕ್ತಿ ಪ್ರಪಂಚದ ವ್ಯವಹಾರದಲ್ಲಿ ಅಂಟಿಯೂ ಅಂಟಿದರಂತೆ ಬಾಳುವಾತ. ಎರಡುಮಾರ್ಗಗಳೆಂದರೆ ಒಂದು ಮೋಕ್ಷಮಾರ್ಗ. ಇದನ್ನು ಅರ್ಚಿ ಎನ್ನುತ್ತಾರೆ. ಇನ್ನೊಂದು ಪುನರ್ಜನ್ಮದ ಮಾರ್ಗ. ಇದನ್ನು ಧೂಮ ಮಾರ್ಗ ಎನ್ನುತ್ತಾರೆ. ದೇವರ್ಷಿ-ನಿಮ್ಮೆಲ್ಲ ಪ್ರಶ್ನೆಗಳಿಗೆ ಉತ್ತರ ಕೊಟ್ಟಿದ್ದೇನೆ ಮತ್ತು ಆ ಉತ್ತರಗಳು ಶಾಸ್ತ್ರ ಸಮ್ಮತವಾಗಿವೆಯೆಂದು ಹೇಳುತ್ತೇನೆ.

ಬಾಲಕ – ಸುತನು ಹೇಳಿದ್ದನ್ನು ಕೇಳಿ ನಾರದರು ತುಂಬ ಸಂತೋಷಪಟ್ಟು, ಸಂಕಲ್ಪಿಸಿದ್ದಂತೆ, ತಾವು ಧರ್ಮ ವರ್ಮನಿಂದ ಪಡೆದಿದ್ದ ಬಹುಮಾನವನ್ನೆಲ್ಲ ಕೊಡಬಯಸಿದರು. ಆದರೆ ಸುತನು ಅದಕ್ಕೆ ಒಪ್ಪಲಿಲ್ಲ.

ನಾನು ಕೊಡಲಿರುವ ವಸ್ತುಗಳು ಮತ್ತು ಜಹಗೀರಾಗಿ ಬಂದ ಭೂಮಿ ಅತ್ಯಲ್ಪವೆಂಬ ದೃಷ್ಟಿಯಿಂದ ನೀನು ಒಪ್ಪುವುದಿಲ್ಲವೆಂದು ಭಾವಿಸಲೇ ? — ನಾರದರು ಕೇಳಿದರು.

ಹಾಗಲ್ಲ ದೇವರ್ಷಿ! ಕೇಳಿದ ಪ್ರಶ್ನೆಗಳಿಗೆ ತಿಳಿದಮಟ್ಟಿಗೆ ಉತ್ತರಕೊಟ್ಟ ಮಾತ್ರಕ್ಕೆ ಬಹುಮಾನ ಪಡೆಯುವುದೇ ? ಅದೂ ಹಿರಿಯರಾದ ತಮ್ಮಿಂದ? ತಮ್ಮ ಆಶೀರ್ವಾದವೇ ನನಗೆ ಸರ್ವಸ್ವ - ತಮ್ಮ ದರ್ಶನವೇ ನನ್ನ ಸೌಭಾಗ್ಯ — ಸುತನು ವಿನಯವಾಗಿ ಹೇಳಿದ.

ಮೇಧಾವಿ ಬಾಲಕನಿಗೆ ದೇವರ್ಷಿ ನಾರದರು ಭೂದಾನಮಾಡಿದರೆಂಬ ವಿಚಾರವಾದರೂ ಜಗತ್ತಿನಲ್ಲಿ ಪ್ರಚುರವಾಗಲಿ. ಅಷ್ಟೇ ನನ್ನ ಉದ್ದೇಶವೇ ಹೊರತು–ನಿನ್ನ ಪಾಂಡಿತ್ಯಕ್ಕಿದು ಸರಿಸಾಟಿಯೆಂದಲ್ಲ— ನಾರದರು ನುಡಿದರು.

ಹೂವಿನಿಂದ ನಾರಿಗೆ ಸ್ವರ್ಗ – ದೇವರ್ಷಿಗಳಾದ ತಮ್ಮ ಮೂಲಕ ಕಿರಿಯ ಬಾಲಕನಾದ ನಾನು ಪ್ರಸಿದ್ಧನಾದಂತಾಯ್ತು– ಎಲ್ಲ ತಮ್ಮ ಅನುಗ್ರಹ.

ಎಂದ ಸುತನುವಿನ ಕೈಗೆ ನಾರದರು ದಾನ ಧಾರೆಯೆರೆದು ಧನ್ಯರಾದರು.



---

( ಹಿಂದಿನ ಪುಟದಿಂದ )

ಗಳನ್ನು ಹೇಳುತ್ತೇವೆ”–ಎಂದು ಈ ಉಪನಿಷತ್ತು ಮುಕ್ತಾಯವಾಗುತ್ತದೆ.

‘ಈಶೋಪನಿಷತ್ತು’ ಎಂದೂ ಸಹಾ ಕರೆಯಲಾಗುವ ಇದರ ವಿಶೇಷ ಉಪದೇಶವು, ನಿತ್ಯ ಕರ್ಮ – ಬ್ರಹ್ಮವಿದ್ಯೆಗಳಲ್ಲಿ ಯಾವ ವಿಧವಾದ ಭೇದವನ್ನೂ ಕಲ್ಪಿಸದೆ ಸಮವಾಗಿ ಇದನ್ನು ಅನುಷ್ಠಾನ ಮಾಡಬೇಕೆಂಬುದೇ ಆಗಿದೆ. “ಈ ಪ್ರಪಂಚದಲ್ಲಿ ಉಪನಿಷತ್ತುಗಳಿಗಿಂತ ಹೆಚ್ಚು ಪ್ರತಿಫಲವನ್ನು ಕೊಡುವ, ಉದ್ಧರಿಸುವ ಮಂತ್ರ ಯಾವುದೂ ಇಲ್ಲ.........” ಎಂಬುದಾಗಿ ಜರ್ಮನಿಯ ತಜ್ಞ ಶೋಪೆನ್ ಹೋವರನೂ, “ಜೀವನ ಮರಣಗಳ ನರಳಾಟದಲ್ಲಿ ಇದು ಸಮಾಧಾನವನ್ನು ಕೊಡುವುದು – ಭಾರತೀಯರೇ, ಇದನ್ನು ಕೈಬಿಡಬೇಡಿ ” – ಎಂಬುದಾಗಿ ಡಾಯ್ಸನ್‌ನೂ ಹೇಳಿರುತ್ತಾರೆ. ಪಾಶ್ಚಾತ್ಯರ ಈ ಮಾತುಗಳಲ್ಲಿ, ಉಪನಿಷತ್ತುಗಳ ಅಧ್ಯಯನ ಮತ್ತು ಅದನ್ನು ಕಾಪಾಡುವುದರ ಬಗ್ಗೆ ವಹಿಸಬೇಕಾದ ಎಚ್ಚರವಿದೆ. ಇದನ್ನು ಅರಿತು ಕೊಂಡು ಬಾಳುವುದು ಇಹ – ಪರದ ಸಾಧನವಾದೀತು.

–( ಸಾಧಾರ. )

---

# ಸೂಚನೆ.

ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಗೆ ಕಾಣಿಕೆಗಳನ್ನು ಕಳುಹಿಸುವ ಭಕ್ತಾದಿಗಳು “ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ” ಇವರ ಖಾತೆಯ ಹೆಸರಿಗೆ ಮಾತ್ರವೇ ಬ್ಯಾಂಕ್ ಡ್ರಾಫ್ಟ್ ಕಳುಹಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

**ತಿ. ತಿ. ದೇ.**

# ಧರ್ಮಭೂತಜ್ಞಾನ

ಸಾಮಾನ್ಯವಾಗಿ ಜ್ಞಾನಶಬ್ದದ ಅರ್ಥ ವಿವರಿಸುವುದು ಕಷ್ಟ. ವಿವೇಕ, ವಿವೇಚನೆ, ಬುದ್ಧಿವಂತಿಕೆ, ತಿಳಿವಳಿಕೆ, ಪಾಂಡಿತ್ಯ, ಚಾತುರ್ಯ; – ಇತ್ಯಾದಿ ಪದಗಳಿಂದ ಅರ್ಥ ಮಾಡುವುದು ರೂಢಿಯಲ್ಲಿದೆ. ಆದರೂ ಅದರ ಅರ್ಥ ಪೂರ್ಣವಾಗುವುದಿಲ್ಲ. ಯಾವುದು ಸಂಶಯಗಳನ್ನು ನಿವೃತ್ತಿ ಮಾಡುವುದೋ, ಯಾವುದು ಕಣ್ಮರೆಯಾದ ವಿಷಯವನ್ನು ತೋರಿಸುವುದೋ, ಯಾವುದು ಎಲ್ಲವನ್ನು ತಿಳಿಯುವ ಒಳಗಿನ ಕಣ್ಣಾಗಿರುವುದೋ ಅದು ಜ್ಞಾನ. ಜ್ಞಾನವು ಸುಖಕರ. ಸ್ವಬುದ್ಧಿ ಎಂದು ಹೇಳಲಾಗಿದೆ. ದೀಪದ ಬೆಳಕಿನಿಂದ ಪದಾರ್ಥಗಳನ್ನು ಕಾಣುವಂತೆ, ಬುದ್ಧಿ ಎಂಬ ದೀಪದಿಂದ ಆತ್ಮನನ್ನು ಕಾಣಬಹುದು. ಇದು ಜ್ಞಾನ. ಮನುಷ್ಯನ ಜ್ಞಾನಕ್ಕೆ ಒಂದು ಮಿತಿ ಇದೆ. ಪರಮಾತ್ಮನು ಸರ್ವಜ್ಞ. ಜೀವನು ಜ್ಞಾನಾಶ್ರಯ. ಮತಿ, ಪ್ರಜ್ಞೆ, ಧಿಷಣ, ಮನೀಷಾ, ಧೀಃ, ಬುದ್ಧಿ – ಇತ್ಯಾದಿ ಪದಗಳು ಜ್ಞಾನದ ಪರ್ಯಾಯಪದಗಳು.

ಧರ್ಮಭೂತಜ್ಞಾನವು ಸ್ವಯಂ ಪ್ರಕಾಶವುಳ್ಳ ಅಚೇತನ ದ್ರವ್ಯವಾಗಿದ್ದೂ ವಿಷಯಗಳನ್ನು ತಿಳಿಯಪಡಿಸುವ ಲಕ್ಷಣವುಳ್ಳದ್ದು. ಇದು ಜ್ಞಾತೃವಾದ ಆತ್ಮನಿಗಿಂತ ಭಿನ್ನ. ಇದು ಆತ್ಮನ ಗುಣ ಅಥವ ಧರ್ಮ. ಆತ್ಮನು ಸ್ವಯಂಪ್ರಕಾಶವುಳ್ಳವನು. ಅದು ತನ್ನನ್ನು ತಾನೇ ತಿಳಿಯಬಲ್ಲುದು.

ಧರ್ಮಭೂತಜ್ಞಾನವು ಅಚೇತನ ತನ್ನನ್ನು ತಾನು ತಿಳಿಯಲಾರದು. ಇದು ತನ್ನನ್ನು ಬಿಟ್ಟು ಉಳಿದೆಲ್ಲವನ್ನೂ ಆತ್ಮನಿಗೆ ತೋರಿಸುವುದು. ಜ್ಞಾನಾಶ್ರಯವಾದರೆ ಚೇತನ, ಇಲ್ಲದಿದ್ದರೆ ಅಚೇತನ. ಧರ್ಮಭೂತಜ್ಞಾನವು ದ್ರವ್ಯವೂ ಆಗಿ, ಗುಣವೂ ಆಗಿ ವಿಭುವಾಗಿರುವುದು. ಇದು ಆತ್ಮಕ್ಕೆ ಧರ್ಮವಾಗಿ ಅದರೊಡನೆ ಇರುವುದರಿಂದ ಗುಣ. ಸಂಕೋಚ ವಿಕಾಸಾದಿ ಅವಸ್ಥೆ ಹೊಂದುವುದರಿಂದ ದ್ರವ್ಯ. ದ್ರವ್ಯ ಎಂದರೆ ಉಪಾದಾನ ಕಾರಣವಾದುದು. ಇದು ಪದಾರ್ಥಗಳನ್ನು ಪ್ರಕಾಶಪಡಿಸುವುದು.

ಪರಮಾತ್ಮ ಮತ್ತು ನಿತ್ಯಸೂರಿಗಳ ಧರ್ಮಭೂತಜ್ಞಾನವು ನಿತ್ಯವಾಗಿ ವಿಭುವಾಗಿರುವುದು. ಪರಮಾತ್ಮನ ಅನಂತಗುಣಗಳಾದ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು, ಸೌಶೀಲ್ಯ, ವಾತ್ಸಲ್ಯ, ಮಾರ್ದವ, ಆರ್ಜವ, ಸೌಹಾರ್ದ, ಸೌಮ್ಯ, ಕಾರುಣ್ಯ, ಮಾಧುರ್ಯ, ಗಾಂಭೀರ್ಯ, ಔದಾರ್ಯ, ಚಾತುರ್ಯ, ಧೈರ್ಯ, ಸ್ಥೈರ್ಯ, ಶೌರ್ಯ ಪರಾಕ್ರಮ – ಮುಂತಾದ ಗುಣಗಳು ಧರ್ಮಭೂತಜ್ಞಾನದ ಅವಸ್ಥಾ ವಿಶೇಷಗಳು.

ಜ್ಞಾನ ಎಂದರೆ ಎಲ್ಲವನ್ನೂ ಸಾಕ್ಷಾತ್ಕಾರ ಮಾಡಿಕೊಳ್ಳುವ ಸ್ವರೂಪ. ಅಘಟಿತಘಟನಾಸಾಮರ್ಥ್ಯವೇ ಶಕ್ತಿ. ಧಾರಣಮಾಡುವ ಸಾಮರ್ಥ್ಯವು ಬಲ. ಆಳುವ ಸಾಮರ್ಥ್ಯ ಐಶ್ವರ್ಯ. ವಿಕಾರ ಹೊಂದುವುದು ವೀರ್ಯ. ಮತ್ತೊಬ್ಬನನ್ನು ಅನುಭಾವಿಸುವ ಸಾಮರ್ಥ್ಯ ತೇಜಸ್ಸು. ಮಹಾತ್ಮರು ಮಂದಾಧಿಕಾರಿಗಳೊಡನೆ ಯಾವ ಭೇದವೂ ಇಲ್ಲದೆ ಸಮರಸವಾಗಿ ನಡೆಯುವುದು ಸೌಶೀಲ್ಯ. ದೋಷಬುದ್ಧಿ ಇಲ್ಲದಿರುವುದು ವಾತ್ಸಲ್ಯ. ಆಶ್ರಿತರಾದವರಿಗೆ ವಿರಹ ತಾಳದಂತೆ ಮಾಡುವುದು ಮಾರ್ದವ. ಮನಸ್ಸು, ವಾಕ್ಕು, ಶರೀರ ಇವುಗಳನ್ನು ಏಕರೂಪತೆಯಿಂದ ಇಡುವುದು ಆರ್ಜವ, ಆಶ್ರಿತರನ್ನು ರಕ್ಷಿಸುವುದರಲ್ಲಿ ಆತುರ ಹೊಂದಿರುವುದು ಸೌಹಾರ್ದ. ಹುಟ್ಟು, ತಿಳಿವಳಿಕೆ, ನಡತೆ, ಗುಣ – ಇತ್ಯಾದಿಗಳ ಅಪೇಕ್ಷೆಯಿಲ್ಲದೆ ಎಲ್ಲರಿಂದಲೂ ಆಶ್ರಯಿಸಲು ಅನುಕೂಲವಾಗಿರುವುದು ಸೌಮ್ಯ. ಸ್ವಾರ್ಥವಿಲ್ಲದೆ ಇತರರ ದುಃಖವನ್ನು ಹೋಗಲಾಡಿಸುವುದು ಕಾರುಣ್ಯ.

ಶ್ರೀ ಡಿ. ಕೃಷ್ಣ ಅಯ್ಯಂಗಾರ್

ಹಾಲಿನಂತೆ ಯಾವ ಉಪಾಧಿಯೂ ಇಲ್ಲದೆ ಸ್ವಾದುವಾಗಿರುವುದು ಮಾಧುರ್ಯ. ಭಕ್ತರಲ್ಲಿ ಅನುಗ್ರಹಮಾಡಿ ಅವರ ಇಷ್ಟಾರ್ಥ ಸಲ್ಲಿಸುವ ಗುಣ ಹೊಂದಿರುವುದು ಗಾಂಭೀರ್ಯ. ಅಪರಿಮಿತವಾಗಿ ಕೊಟ್ಟು ತೃಪ್ತಿಹೊಂದದೆ ಇರುವ ಗುಣ ಔದಾರ್ಯ. ಆಶ್ರಿತರ ದೋಷ ಮರೆಯುವುದು ಚಾತುರ್ಯ. ಅಚಲವಾಗಿರುವುದು ಸ್ಥೈರ್ಯ. ಪ್ರತಿಜ್ಞೆಗೆ ಭಂಗ ಬಾರದಂತೆ ವರ್ತಿಸುವುದು ಧೈರ್ಯ. ಶತ್ರುಸೈನ್ಯದೊಳಗೆ ಪ್ರವೇಶಮಾಡುವದಿ ಸಾಮರ್ಥ್ಯ, ಶೌರ್ಯ. ಶತ್ರುಸೈನ್ಯವನ್ನು ನಾಶಮಾಡುವುದು ಪರಾಕ್ರಮ. ಇವೆಲ್ಲವೂ ಧರ್ಮಭೂತಜ್ಞಾನದ ಅವಸ್ಥಾವಿಶೇಷಗಳು.

ಧರ್ಮಭೂತಜ್ಞಾನವು ಸ್ವಯಂಪ್ರಕಾಶವಾದುದು. "ಅನುಭವಾದ್ದೂರತ್ವಂ, ಸ್ಮೃತಿನಿಮಿತ್ತಂ ಪ್ರಕಾಶಃ" ಎಂದು ನಾಥಮುನಿಗಳು ತಿಳಿಸಿದ್ದಾರೆ. ಸ್ಮರಣಕ್ಕೆ ಹೇತುವಾಗಿರುವಂತೆ ಅನುಭವಕ್ಕೆ ಸಂನಿಕೃಷ್ಟವಾಗಿರುವುದೇ ಪ್ರಕಾಶವೆನಿಸಿಕೊಳ್ಳುವದು. ಇದನ್ನು ಪರಾಶರಭಟ್ಟರು ಅನೇಕ ಕಾರಿಕೆಗಳಿಂದ ಉದಹರಿಸಿದ್ದಾರೆ.

ಜೀವಾತ್ಮನ ಅನೇಕ ಗುಣ ವಿಶೇಷಗಳು ಧರ್ಮಭೂತಜ್ಞಾನದ ಅವಸ್ಥಾ ವಿಶೇಷಗಳಾಗಿವೆ. ಅವು ಯಾವುವೆಂದರೆ – ಪ್ರತ್ಯಕ್ಷ, ಅನುಮಾನ, ಆಗಮ, ಸ್ಮೃತಿ, ಸಂಶಯ, ಭ್ರಮ, ವಿವೇಕ, ವ್ಯವಸಾಯ, ರಾಗ, ದ್ವೇಷ, ಮದ, ಮಾತ್ಸರ್ಯ, ಧೈರ್ಯ, ಚಾಪಲ್ಯ, ಡಂಭ, ಲೋಭ, ಕ್ರೋಧ, ದರ್ಪ, ಅಭಿನಿವೇಶ, ನಿರ್ವೇದನ ಮತ್ತು ಆನಂದ. ಇವುಗಳ ಜೊತೆಗೆ ಸುಮತಿ, ದುರ್ಮತಿ, ಸುಪ್ರೀತಿ, ಉನ್ನತಿ, ಶಾಂತಿ, ಮೈತ್ರಿ, ತುಷ್ಟಿ, ವಿರಕ್ತಿ, ದಯಾ, ಲಜ್ಜೆ, ತಿತಿಕ್ಷೆ, ವಿಜಿಗೀಷು, ಚಿಕೀರ್ಷ, ಕ್ಷಮಾ, ಜುಗುಪ್ಸಾ ಭಾವನ, ಕುಹನಾ, ಅಸೂಯ, ತೃಷ್ಣಾ, ವಾಸನಾ, ಚರ್ಚಾ, ಶ್ರದ್ಧಾ, ಭಕ್ತಿ, ಮತ್ತು

ಪ್ರಪತ್ತಿ – ಇತ್ಯಾದಿಗಳು ಜೀವನ ಗುಣವಾಗಿ ಧರ್ಮಭೂತಜ್ಞಾನಕ್ಕೆ ಸೇರಿವೆ. ಹೀಗೆ ಜೀವಾತ್ಮ ಸ್ವರೂಪಕ್ಕೆ ಮಣಿದ್ಯುಮಣಿ, ದೀಪ ದೃಷ್ಟಾಂತಗಳನ್ನೂ, ಆತ್ಮನ ಧರ್ಮ ಭೂತಜ್ಞಾನಕ್ಕೆ ಮಣಿದ್ಯುಮಣಿ, ದೀಪಗಳ ಪ್ರಭೆಯ ದೃಷ್ಟಾಂತವನ್ನೂ ತೋರಿ ಸುವುದು ಶಾಸ್ತ್ರದ ವಾಚಿಕೆಯಾಗಿದೆ.

ಧರ್ಮಭೂತಜ್ಞಾನವು ಸಮಸ್ತ ಚೇತನ ರಲ್ಲಿ ಒಂದೇ ರೀತಿಯದಾಗಿಲ್ಲ. ಪ್ರತಿ ಶರೀರದಲ್ಲಿ ಜೀವನು ಭಿನ್ನ ಭಿನ್ನವಾಗಿರು ವಂತೆ, ಧರ್ಮಭೂತ ಜ್ಞಾನವು ಪ್ರತಿಜೀವ ನಲ್ಲಿ ಭಿನ್ನವಾಗಿರುವುದು.

ಸಕಲ ಬ್ರಹ್ಮಾಂಡದಲ್ಲಿ ಮತ್ತು ನಿತ್ಯ ವಿಭೂತಿಯಲ್ಲಿ ಇರುವ ಪದಾರ್ಥಗಳನ್ನು ಸರ್ವದಾ ಸಾಕ್ಷಾತ್ಕರಿಸುವುದೇ ಧರ್ಮಭೂತ ಜ್ಞಾನಕ್ಕೆ ಸ್ವಾಭಾವಿಕವಾಗಿದ್ದರೂ, ಸಂಸಾರಾವಸ್ಥೆಯಲ್ಲಿ ಕರ್ಮವೆಂಬ ಅವಿದ್ಯೆ ಯಿಂದ ಅದರ ಶಕ್ತಿ ಕುಂಠಿತವಾಗುವುದು. ಕರ್ಮದ ತಾರತಮ್ಯಕ್ಕನುಸಾರವಾಗಿ ಇದಕ್ಕೂ ತಾರತಮ್ಯವೇರ್ಪಟ್ಟು ಇಂದ್ರಿಯ ಗಳ ಮೂಲಕ ಇದಕ್ಕೂ ಪ್ರಸರಣವುಂಟಾಗ ಬೇಕೆಂಬ ನಿರ್ಬಂಧ ಬರುವುದು. ಹೀಗೆ ಜ್ಞಾನಪ್ರಸರಣ ತಾರತಮ್ಯವಿರುವುದ ರಿಂದಲೇ, ಪ್ರಾಣಿಗಳಲ್ಲಿಯೂ ಪರಸ್ಪರ ತಾರತಮ್ಯವಿರುವುದು.

ಧರ್ಮಭೂತಜ್ಞಾನಕ್ಕೆ ಪ್ರಧಾನವಾದ ಇನ್ನೂ ಮೂರು ಅವಸ್ಥೆಗಳುಂಟು. ಅವು ಯಾವುವೆಂದರೆ ಪರಭಕ್ತಿ, ಪರಜ್ಞಾನ, ಮತ್ತು ಪರಮ ಭಕ್ತಿ. ಅಭಿಮತವಾದ ವಸ್ತುವಿನ ದರ್ಶನವಿಲ್ಲದಿರುವಾಗ ಅದನ್ನು ಹೇಗಾದರೂ ಮಾಡಿ ನೋಡಬೇಕೆಂಬ ಉತ್ಕಟ ಇಚ್ಛೆಯ ಜ್ಞಾನಾವಸ್ಥೆಯೇ ಪರ ಭಕ್ತಿ. ದರ್ಶನ ದೊರೆತಮೇಲೆ ಅದರ ಗುಣಾತಿಶಯಗಳು ಹೃದಯದಲ್ಲಿ ವ್ಯಾಪಿ ಸುವುದು, 'ಇಷ್ಟುದಿವಸ ದರ್ಶನ ದೊರೆ ಯದೆ ಜನ್ಮ ವ್ಯರ್ಥವಾಯಿತಲ್ಲಾ !, ಇನ್ನು ಮೇಲಾದರೂ ಇದರ ಸಂಬಂಧ ಪಡೆಯ ಬೇಕು' ಎಂದು ಇಷ್ಟಪಡುವ ಜ್ಞಾನ ಪರ ಜ್ಞಾನ. ಸಂಗಮ ದೊರೆತಮೇಲೆ ವಿರಹ ವುಂಟಾದರೆ ಗತಿಯೇನು ಎಂಬ ಭಯ ವುಂಟಾಗುವುದು. ಅಂತಹ ವಿಯೋಗ ವುಂಟಾಗದಿರಲಿ ಎಂಬ ಜ್ಞಾನಾವಸ್ಥೆ ಪರಮ ಭಕ್ತಿ. ಈ ಅವಸ್ಥೆಯು ಉಪಾಸ ಕರಿಗೆ ಮೋಕ್ಷಸಾಧನವಾಗುವುದು. ಈ ಮೂರು ಅವಸ್ಥೆಗಳು, ಪ್ರಾಪಂಚಿಕ ಪದಾರ್ಥಗಳಲ್ಲಿಯೇ ಪರ್ಯವಸಾನವಾಗುವು ದಾದರೆ, ಅಂತಹವನು ಸಂಸಾರದಿಂದ ಮುಕ್ತನಾಗಲಾರನು. ಈ ಅವಸ್ಥೆಗಳು, ಅನಂತಕಲ್ಯಾಣಗುಣಾಕರನೂ, ಉಭಯ ವಿಭೂತಿ ನಾಯಕನೂ, ಹೇಯಪ್ರತ್ಯನೀ ಕನೂ ಆಗಿರುವ ಪರಮಾತ್ಮನಲ್ಲಿ ಉಂಟಾ ದರೆ, ಉಪಾಸಕನು ಪ್ರಾರಬ್ಧ ಕರ್ಮಾವ ಸಾನ ಕಾಲದಲ್ಲಿಯೂ, ಪ್ರಪನ್ನನು ದೇಹಾ ವಸಾನದಲ್ಲಿಯೂ, ಸಮಸ್ತ ದುಃಖದಿಂದ ಮುಕ್ತನಾಗಿ ಶಾಶ್ವತವಾದ ಆನಂದ ಸಾಮ್ರಾಜ್ಯ ಪಡೆಯುವರು.

ದರ್ಶನಂ ಪರಭಕ್ತಿಃ ಸ್ಯಾತ್
ಪರಜ್ಞಾನಂತು ಸಂಗಮಃ ।
ಪುನರ್ವಿಶ್ಲೇಷ ಭೀರುತ್ವಂ
ಪರಮಭಕ್ತಿ ರುಚ್ಯತೇ ॥

ಇಂತಹ ಅನೇಕ ರಹಸ್ಯಾರ್ಥಗಳನ್ನು ಮಹರ್ಷಿಗಳು ಉಪದೇಶ ಮಾಡಿದ್ದಾರೆ.

ಶ್ರೀಕೃಷ್ಣನ ವಿಷಯವಾಗಿ ಗೋಪ ಸ್ತ್ರೀಯರು ಕಾಮವನ್ನೂ, ರಾಕ್ಷಸರು ಕ್ರೋಧವನ್ನೂ, ದಿನೇ ದಿನೇ ಹೆಚ್ಚಿಸಿ ಕೊಂಡು ಮೋಕ್ಷ ಪಡೆದರು.

ಕಾಮಕ್ರೋಧೌ ನೃಣಾಂ ಲೋಕೇ
ನಿರಯದ್ವಾರ ಕಾರಣಂ ।
ತಾವೇವತು ಹರಿಂ ಪ್ರಾಪ್ಯ
ಮುಕ್ತ್ಯೋಗೋಪೀ ಸುರದ್ವಿಷಾಂ ॥

ಭಗವನ್ನಾಮವು ನಿರತಿಶಯ ಭೋಗ ವಾಗಿ ಸುಖರೂಪವಾಗುವುದು. ಭಗವತ್ಕ್ರೋಧವು ಪೂರ್ವಾವಸ್ಥೆಯಲ್ಲಿ ದುಃಖವನ್ನೂ ಉತ್ತರಾವಸ್ಥೆಯಲ್ಲಿ ಸುಖ ವನ್ನೂ ಉಂಟುಮಾಡುವುದು. ವಿವೇಕಿ ಗಳು ಭಗವನ್ನಾಮದ ದಾರಿಹಿಡಿದು ಮೋಕ್ಷ ಪಡೆಯುವರು. ಇದು ಅವರ ಸ್ವರೂಪಕ್ಕೆ ವಿಹಿತವಾಗಿರುವುದಲ್ಲದೆ, ಸ್ವಭಾವಕ್ಕೂ

ಅನುಗುಣವಾಗಿರುವುದು. ಹೀಗೇ ತಿಳಿಯುವುದು ಧರ್ಮಭೂತಜ್ಞಾನ.

ಪರಾಶರಮಹರ್ಷಿಗಳು ಧರ್ಮಭೂತ ಜ್ಞಾನವನ್ನು ಬಹುಚೆನ್ನಾಗಿ ವಿವರಿಸಿದ್ದಾರೆ.

ತತ್ಕರ್ಮಯನ್ನಬಂಧಾಯ
ಸಾವಿದ್ಯಾ ಯಾ ವಿಮುಕ್ತಯೇ ।
ಆಯಾಸಾ ಯಾ ಪರಂಕರ್ಮಾ
ವಿದ್ಯಾಽನ್ಯಾ ಶಿಲ್ಪನೈಪುಣಂ ॥

ಜೀವನ ಬಂಧ ಬಿಡಿಸುವುದರಲ್ಲಿ ಯಾವುದು ಪರ್ಯವಸಾನವಾಗುವುದೋ ಅದು ನಿಜವಾದ ಕರ್ಮ. ಉಳಿದ ಕರ್ಮಗಳೆಲ್ಲ ಶರೀರ ಕ್ರಮಕ್ಕಾಗಿಯೇ ಪರಿಣಮಿತವಾಗುತ್ತವೆ ಮತ್ತು ಬಂಧನ ಬಿಡುಗಡೆಗಲ್ಲ. ಹಾಗೆಯೇ ಯಾವ ಜ್ಞಾನವು ಮೋಕ್ಷಪ್ರಾಪ್ತಿಯಲ್ಲಿ ಪರ್ಯವಸಾನವಾಗುವುದೋ ಅಂತಹ ಜ್ಞಾನ ನಿಜವಾದ ಜ್ಞಾನ. ಉಳಿದ ಜ್ಞಾನವೆಲ್ಲ ಶಿಲ್ಪ ಸಾಮರ್ಥ್ಯಗಳಾಗಿ, ಮೋಕ್ಷವನ್ನುಂಟು ಮಾಡಲಾರವು.

ಧರ್ಮಭೂತಜ್ಞಾನ ನಿರೂಪಣೆಗಾಗಿ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳನ್ನು ಉದಹರಿಸಲಾಗಿದೆ. ಜೀವಾತ್ಮ ಮತ್ತು ಪರಮಾತ್ಮರ ಯಥಾರ್ಥ ಜ್ಞಾನ ಪಡೆದ ಸಾಧಕನು, ತನ್ನ ಶಕ್ತಿಗನುಸಾರವಾಗಿ, ಫಲ ಸಂಗರಹಿತನಾಗಿ ಮಾಡುವ ಕರ್ಮ ಕರ್ಮಯೋಗವೆನಿಸುವುದು. ಇದರಲ್ಲಿ ನಿಷಿದ್ಧವಲ್ಲದ ಕಾಮ್ಯಕರ್ಮಗಳೂ, ನಿತ್ಯ ನೈಮಿತ್ತಿಕವಾದ ಕರ್ಮಗಳೂ ಸೇರಿವೆ. ದೇವತಾರ್ಚನೆ, ತಪಸ್ಸು, ದಾನ, ಯಜ್ಞ ತೀರ್ಥಯಾತ್ರೆ ಇತ್ಯಾದಿ ನಾನಾವಿಧವಾಗಿರುವುದು. ಇದು ಜೀವನದ ಕಲ್ಮಷವನ್ನು ಹೋಗಲಾಡಿಸುವುದು ಮತ್ತು ಜ್ಞಾನಯೋಗವನ್ನುಂಟುಮಾಡುವುದು. ಪ್ರಕೃತಿಗಿಂತ ಭಿನ್ನವಾದ ತನ್ನ ಆತ್ಮ ಪರಮಾತ್ಮನಿಗೆ ಶೇಷಭೂತವಾಗಿದೆ ಎಂದು ಮಾಡುವ ಚಿಂತನೆಯೇ ಜ್ಞಾನಯೋಗ, ಇದು ಭಕ್ತಿಯೋಗವನ್ನುಂಟುಮಾಡುವುದರಲ್ಲಿ ಸಹಾಯ ಮಾಡುವುದು.

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ ಧ್ಯಾನ, ಸಮಾಧಿ–ಎಂಬ ಅಷ್ಟಾಂಗಗಳಿಂದ ಕೂಡಿ, ತೈಲಧಾರೆಯಂತೆ ಅವಿಚ್ಛಿನ್ನವಾದ, ಪರಮಾತ್ಮನ ನಾಮಸ್ಮರಣೆಯ ಪ್ರವಾಹವೇ ಭಕ್ತಿಯೋಗ ಭಕ್ತಿಯೋಗವು, ವಿವೇಕ ವಿಮೋಕ, ಅಭ್ಯಾಸ, ಕ್ರಿಯೆ, ಕಲ್ಯಾಣ ಅನವಸಾದ, ಮತ್ತು ಅನುದ್ಧರ್ಷ – ಎಂಬ ಸಾಧಕ ಸಪ್ತಕಗಳಿಂದ ಉಂಟಾಗುತ್ತವೆ. ವಿವೇಕ ಎಂದರೆ ದುಷ್ಟವಲ್ಲದ ಆಹಾರದಿಂದ ಉಂಟಾಗುವ ಕಾಯಶುದ್ಧಿ. ಕಾಮಸಂಪರ್ಕವಿಲ್ಲದಿರುವುದು ವಿಮೋಕ. ಪರಮಾತ್ಮನನ್ನು ಸದಾ ಧ್ಯಾನಿಸುವುದು ಅಭ್ಯಾಸ, ತನ್ನ ಶಕ್ತಿಗನುಸಾರವಾಗಿ ಮಾಡುವ ಪಂಚಮಹಾಯಜ್ಞದ ಅನುಷ್ಠಾನ ಕ್ರಿಯೆ, ಕಲ್ಯಾಣ ಎಂದರೆ ಸತ್ಯ, ಆರ್ಜವ, ದಯೆ, ದಾನ ಅಹಿಂಸೆ ಮತ್ತು ಅನಭಿಧ್ಯಾ. ಧೈರ್ಯವಿಲ್ಲದಿರುವುದು, ಅನವಸಾದ. ಅತಿಹರ್ಷವಿಲ್ಲದಿರುವುದು ಅನುದ್ಧರ್ಷ. ಈ ಯೋಗಗಳ ಉಪದೇಶ ಮತ್ತು ವಿವರಣವನ್ನು ಗುರುಮುಖೇನ ಪಡೆಯಬೇಕು.

ಈ ಮೂರು ಯೋಗಗಳೇ ಅಲ್ಲದೆ ಪ್ರಪತ್ತಿಯೋಗ ಅಥವ ಶರಣಾಗತಿ ಎಂಬ ಸಾಧನವೂ ಇದೆ. ಇದು ತಿಳಿಸುವುದೇನೆಂದರೆ "ಪರಮಾತ್ಮನಿಗೆ ಅನುಕೂಲವಾದುದನ್ನು ಮಾಡು, ಪ್ರತಿಕೂಲವಾದುದನ್ನು ಬಿಡು, ಆತನೇ ರಕ್ಷಕನು, ಇನ್ನಾರೂ ರಕ್ಷಕರಿಲ್ಲ ಎಂಬ ಮಹಾ ವಿಶ್ವಾಸವನ್ನು ಇಡು. ಅವನೇ ರಕ್ಷಕ ಎಂದು ವರಿಸಿ ಕಾರ್ಪಣ್ಯ ಹೊಂದಿ ಆತ್ಮನನ್ನು ಅರ್ಪಿಸು". ಇಂತಹ ಪ್ರಪತ್ತಿಯೋಗ ಆಚರಣೆಯಿಂದ ದೇಹಾವಸಾನಾನಂತರ ಮೋಕ್ಷ ದೊರೆಯುವುದು, ಇದನ್ನು ಗುರುಮುಖೇನ ತಿಳಿಯ ಬೇಕು. ಹೀಗೆ ಪ್ರಪತ್ತಿಯು ಸರ್ವಾದರಣೀಯವಾಗಿರುವುದಲ್ಲದೆ, ಸರ್ವೋತ್ಕರ್ಷಕವೂ ಆಗಿರುವುದು.

ಇಂತಹ ಧರ್ಮಭೂತಜ್ಞಾನವು ವಿಶಿಷ್ಟಾದ್ವೈತ ದರ್ಶನದ ವೈಶಿಷ್ಟ್ಯವಾಗಿದೆ. ಇದನ್ನು ಕೂಲಂಕಷವಾಗಿ ವಿಚಾರಮಾಡಿ, ಎಲ್ಲರೂ ಮೋಕ್ಷಪಡೆಯಬಹುದು.



## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.




# ಪ್ರತಿಭಾಪೂರ್ಣವಾದ ಕೃತಿ

## ಖರಾಸುರ ವಧೆ

**ಲೇಖಕರು: ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್.**

**ಪ್ರಕಾಶಕರು: ಗೋಪಾಲ ಕೃಷ್ಣ ಪ್ರಕಾಶನ.**

**ದೇಲಂಪಾಡಿ, ಕಾಸರಗೋಡು ತಾಲ್ಲೂಕ್.**

**ಪುಟಗಳು: 32. ಬೆಲೆ: 2–50**

ಯಕ್ಷಗಾನ ಸಾಹಿತ್ಯ ಪ್ರಪಂಚದಲ್ಲಿ ಚಿರಪರಿಚಿತರಾಗಿರುವ 'ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟರ ಸೃಜನಾತ್ಮಕ ಕ್ರಿಯೆಗಳಲ್ಲೊಂದಾಗಿದೆ ಈ ಕೃತಿ. ಯಕ್ಷಗಾನ ರಂಗಕ್ಕೆ ಹೊಸತಾಗಿ ಕಾಲಿಡುವ ಕಲಾವಿದರಿಗೆ ಮಾರ್ಗದರ್ಶನ ನೀಡುವ ಸಲುವಾಗಿ ಅರ್ಥದೊಂದಿಗೆ ಕೂಡಿರುವ ಈ ಕೃತಿ ನವನೂತನವಾಗಿ ರಚಿತವಾಗಿದೆ.

ರಾಮಾಯಣದಲ್ಲಿ ಬರುವ ಲೋಕ ಭಯಂಕರನಾದ, 'ಖರಾಸುರನ ವಧೆ' ಈ ಪ್ರಸಂಗದ ಕಥಾವಸ್ತು. ಈ ಕೃತಿಯಲ್ಲಿ ಸಾಹಿತ್ಯ ರಚನೆಯೊಂದಿಗೆ ಅರ್ಥವಿವರಣೆಯು ಇರುವುದರಿಂದ ಲೇಖಕರ ಕವಿತಾಶಕ್ತಿಯನ್ನು ಕಾಣಬಹುದು ಮತ್ತು ಕವಿ ಹೃದಯದ ವೈಶಾಲ್ಯವನ್ನು ಕಾಣಬಹುದು. ಮಿತ ಸಂಖ್ಯೆಯ ಪಾತ್ರಗಳಿಂದ ಕೂಡಿದ ಈ ಪ್ರಸಂಗದಲ್ಲಿ – ಪಂಚವಟಿಯಲ್ಲಿ ರಾಮ ಸೀತೆ, ಲಕ್ಷ್ಮಣರ ವಾಸ್ತವ್ಯ, ರಾಕ್ಷಸೀ ಕೃತ್ಯಗಳಿಂದ ಪೀಡಿತರಾದ ಮುನಿಗಳ ಮೊರೆ, ರಾಮನಿಂದ ದೊರೆತ ಅಭಯ, ಮಾಯಾ ಸೌಂದರ್ಯದಿಂದ ರಾಮಲಕ್ಷ್ಮಣರನ್ನು ವಂಚಿಸಲು ಯತ್ನಿಸುವ ಶೂರ್ಪನಖಿ, ಅವಳಿಗೆ ಲಕ್ಷ್ಮಣನಿಂದಾದ ಶಾಸ್ತಿ, ಸೇಡು ತೀರಿಸಿಕೊಳ್ಳಲು ಶೂರ್ಪನಖಿಯ ಸೋದರರಿಂದ ರಾಮನೊಂದಿಗೆ ಕಾಳಗ, ರಾಮನಿಂದ ದೂಷಣ, ತ್ರಿಶಿರ ಮತ್ತು ಖರಾಸುರರ ವಧೆ – ಮೊದಲಾದ ಸಂಗತಿಗಳು ಕಣ್ಣಿಗೆ ಕಟ್ಟುವಂತೆ ಸಂಭಾಷಣೆಯ ಮೂಲಕ ಅಭಿವ್ಯಕ್ತವಾಗಿದೆ.

ರಾಮ– ಶೂರ್ಪನಖಿ– ಲಕ್ಷ್ಮಣರ ಸಂಭಾಷಣೆಗಳು ಜೀವಂತವಾಗಿ ಮೂಡಿಬಂದಿವೆ. ಶೂರ್ಪನಖಿಯ ಶೃಂಗಾರ ಚೇಷ್ಟೆಗಳು ಮುಚ್ಚುಮರೆಯಿಲ್ಲದೆ ನಿರೂಪಿತವಾಗಿದೆ.

ರಾಮನೊಂದಿಗೆ ನಡೆಯುವ ಯುದ್ಧ ಸನ್ನಿವೇಶದಲ್ಲಿ ದೂಷಣ, ತ್ರಿಶಿರ, ಖರಾಸುರರ ಅಟ್ಟಹಾಸ ಆರ್ಭಟವು ಪಾತ್ರೋಚಿತವಾಗಿ ಮೂಡಿ ಬಂದಿದ್ದು, ಯಕ್ಷಗಾನ ಪ್ರಸಂಗದ ಜೀವಾಳವೆನಿಸಿರುವ ವೀರ ರಸಕ್ಕೆ ಪೋಷಕವಾಗಿವೆ. ಪದ್ಯಗಳು ಕ್ಲಿಷ್ಟತೆಯಿಂದ ಸೊರಗದೆ ಸಹಜ ಸರಳ ಸೌಂದರ್ಯದಿಂದ ಕೂಡಿದ್ದು ಲೇಖಕರ ಕಾವ್ಯರಚನಾಶಕ್ತಿಯ ಪ್ರತೀಕಗಳಾಗಿವೆ. ಗೇಯಗುಣದಿಂದ ಕೂಡಿವೆ. ಕವಿಹೃದಯದ ಭಾವನೆಗಳಿಗೆ ಉದ್ದೇಶಗಳಿಗೆ ಚ್ಯುತಿಯಾಗದಂತೆ ಪದ್ಯಗಳನ್ನು ವಿಶ್ಲೇಷಿಸಿ ಅರ್ಥ ವಿವರಣೆ ನೀಡಿರುವ ಲೇಖಕರ ಪಾಂಡಿತ್ಯ, ಲೋಕಜ್ಞಾನ ಮತ್ತು ಪ್ರತಿಭೆ ಪ್ರಶಂಸಾರ್ಹ.

**– ಕೆ. ಎಸ್. ರಾಮಮೂರ್ತಿ**

---

## ಗ್ರಂಥಾಂತರಂಗ

### ಕೇಶವಾದಿ ರೂಪಗಳು

**ಸಂಪಾದಕರು: ಕೆ. ಅಪ್ಪಣ್ಣಾಚಾರ್ಯ**

**ಪುಟಗಳು 96+8. ಬೆಲೆ: ರೂ. 3–75**

**ಪ್ರತಿಗಳಿಗಾಗಿ:**

**ವೆಲ್‌ಫೇರ್ ಆಫೀಸರ್**
**ಸೇಲ್ಸ್‌ವಿಂಗ್**
**ತಿ. ತಿ. ದೇ. ತಿರುಪತಿ.**

ಸರ್ವೋತ್ತಮನಾದ ಶ್ರೀಮನ್ನಾರಾಯಣನು ಹಲವಾರು ರೂಪಗಳನ್ನು ಹೊಂದಿ ತನ್ನವರನ್ನು ಕಾಯುತ್ತಾನೆ ಎಂಬುದು ಪುರಾಣಪ್ರಸಿದ್ಧ. ಅಂತೆಯೇ ಅವುಗಳಲ್ಲಿನ ಹತ್ತು ಅವತಾರಗಳೂ ಸರ್ವರಿಗೂ ತಿಳಿದದ್ದೇ. ಮತ್ಸ್ಯ ಕೂರ್ಮೇತ್ಯಾದಿ ಅವತಾರಗಳಂತೆಯೇ ಕೇಶವಾದಿ ಇಪ್ಪತ್ನಾಲ್ಕು ರೂಪಗಳೂ ಪ್ರಸಿದ್ಧವೇ, ಆದರೂ ಅವುಗಳ ವಿವರಗಳು ಹೆಚ್ಚು ಮಂದಿಗೆ ತಿಳಿದಿಲ್ಲ. ಕನ್ನಡದಲ್ಲಿ ಕನಕದಾಸರು ಹಾಡಿದ 'ಈಶ ನಿನ್ನ ಸೇವೆಯನ್ನು' – ಕೀರ್ತನೆಯಲ್ಲಿ ಈ 24 ರೂಪಗಳನ್ನೂ ವಿವರಿಸಿ ಪ್ರಾರ್ಥಿಸಿದ್ದಾರೆ. ಮೋಹನದಾಸರು ಇನ್ನೂ ವಿವರವಾಗಿ ಸಿದ್ದಾರೆ ಈ ವಿವರಣೆಯನ್ನು. ಈಗ ಈ 24 ರೂಪಗಳೂ ತತ್ಸಂಬಂಧಿ ರೂಪಕಲ್ಪನೆಯೊಂದಿಗೆ ಪ್ರಕಟವಾಗಿದೆ ಶ್ರೀ ಕೆ. ಅಪ್ಪಣ್ಣಾಚಾರ್ಯರ ಸಂಪಾದನೆಯಲ್ಲಿ.

ಕನ್ನಡ, ತೆಲುಗು, ಆಂಗ್ಲ, ಹಿಂದಿ ಭಾಷೆಗಳಲ್ಲಿ ಒಂದೊಂದು ರೂಪದ ವಿವರಣೆಯನ್ನೂ ನೀಡಿರುವುದು ಇಲ್ಲಿನ ಒಂದು ಹೆಚ್ಚುಗಾರಿಕೆ. ಇತರ ಭಾಷೆಯವರಿಗೆ ಹೊರೆಯಾಗದಂತೆ ಆಯಾ ಭಾಷೆಯ ಜನ ಆಯಾ ವಿವರಗಳನ್ನು ಅರಿಯಲು ನೆರವಾಗುವಂತೆ ಸಂಗ್ರಹವಾಗಿ ನಿರೂಪಿಸಿರುವುದರಿಂದ ಪುಸ್ತಕದ ಮೌಲ್ಯ ಹೆಚ್ಚಾಗಿದೆ.

ಕೇಶವಾದಿ ಇಪ್ಪತ್ತನಾಲ್ಕು ಚಿತ್ರಗಳನ್ನೂ ಹಾಲುಕಾಗದದ ಮೇಲೆ ಅಂದವಾಗಿ ಮುದ್ರಿಸಿರುವುದರಿಂದ ಆಯಾ ವಿವರಗಳ ಪ್ರತ್ಯಕ್ಷ ದರ್ಶನವಾಗುವಂತೆ ಮಾಡಲಾಗಿದೆ.

ದಾಸಸಾಹಿತ್ಯ ಪ್ರಾಜೆಕ್ಟಿನ ವಸ್ತು ಪ್ರದರ್ಶನದ ಅಂಗವಾಗಿರುವ ಈ ಕೇಶವಾದಿ ಇಪ್ಪತ್ತನಾಲ್ಕು ತೈಲವರ್ಣ ಚಿತ್ರಗಳನ್ನು ಕುಂಚದಲ್ಲಿ ಮೂಡಿಸಿದವರು ಕಲಾವಿದ ಶ್ರೀ ಶಿವಶ್ರೀ. ಇಲ್ಲಿ ಅವುಗಳನ್ನು ಕಪ್ಪು ಬಿಳುಪಿನಲ್ಲಿ ಮಾತ್ರವೇ ಮುದ್ರಿಸಲಾಗಿದೆ ಎಂದರೂ ಪುಸ್ತಕದ ಆಂತರಿಕ ಮೌಲ್ಯಕ್ಕೆ ಕೊರತೆಯೇನಿಲ್ಲವಾಗಿದೆ.

ಇಷ್ಟೆಲ್ಲ ಇದ್ದರೂ ಇದರ ಬೆಲೆ ರೂ 3–75 ಮಾತ್ರ. ಸಂಗ್ರಹ ಯೋಗ್ಯವಾದ, ಪಠಣ ಯೋಗ್ಯವಾದ ಪುಸ್ತಕ. ★


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮಲೆಯ ಹೊಸ ಸರತಿಯ ಸಾಲಿನ ಕೋಣೆಗಳಲ್ಲಿ ಫೈಬರ್‌ಗ್ಲಾಸಿನ ಕುರ್ಚಿಗಳನ್ನು ಹಾಕಿಸಲು 14, 61,000 ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

*　*　*　*

ಅಚ್ಚುಕಟ್ಟಾದ ಆಡಳಿತ ನಿರ್ವಹಣೆಯ ಉದ್ದೇಶದಿಂದ ತಿರುಚಾನೂರಿನ ಶ್ರೀಪದ್ಮಾವತೀ ಅಮ್ಮನವರ ದೇವಾಲಯದಲ್ಲೂ, ಮಹಾದ್ವಾರಂ ಸೆಲ್‌ನಲ್ಲೂ ಒಂದೊಂದು ಪೇಷ್ಕಾರ್ ಪದವಿಯ ಹುದ್ದೆಗಳನ್ನುಂಟುಮಾಡಲು ತೀರ್ಮಾನಿಸಲಾಯಿತು.

*　*　*　*

ತಿ. ತಿ. ದೇ. ಬೋರ್ಡ್‌ನ ಆಡಳಿತದಲ್ಲಿ ಒಂದು ಪ್ರತ್ಯೇಕವಾದ ಬೋರ್ಡ್ ಸೆಲ್ ಅನ್ನು ಉಂಟುಮಾಡಿ, ಒಬ್ಬ ಪೇಷ್ಕಾರ್ ದರ್ಜೆಯ ಮೇಲ್ವಿಚಾರಕರು, ಒಬ್ಬ ಯು. ಡಿ. ಸಿ, ಹಾಗೂ ಜವಾನರ ಹುದ್ದೆಗಳನ್ನು ಹೆಚ್ಚಿಗೆ ಮಂಜೂರು ಮಾಡಲು ತೀರ್ಮಾನಿಸಲಾಯಿತು.

*　*　*　*

ಆಂಧ್ರಪ್ರದೇಶ ರಸ್ತೆಸಾರಿಗೆ ಸಂಸ್ಥೆಯಲ್ಲಿ ಡಿವಿಜನಲ್ ಮ್ಯಾನೇಜರ್ ಹುದ್ದೆಗೆ ಭಡತಿ ಹೊಂದಿದ ತಿ. ತಿ. ದೇ. ಯಲ್ಲಿ ಸಾರಿಗೆಯ ಡಿಪೊ ಮ್ಯಾನೇಜರ್ ಆಗಿ ಬದಲಿ ಕೆಲಸ ಮಾಡುತ್ತಿರುವ ಶ್ರೀ ಎಸ್. ವಿ. ಸುಬ್ಬರಾವ್ ಅವರ ಸೇವೆಯನ್ನು ಮುಂದುವರಿಸಲು ತೀರ್ಮಾನಿಸಲಾಯಿತು.

*　*　*　*

ಸಿಕಂದರಾಬಾದಿನ ಶ್ರೀಮತಿ ಡಿ. ವಿ. ವಿಜಯಲಕ್ಷ್ಮಿ ಅವರು ದಾನವಾಗಿ ನೀಡಿದ ಸಂಗಾರೆಡ್ಡಿ ತಾಲ್ಲೂಕಿನ ಕಲವಕುಂಟೆ ಗ್ರಾಮದ ಜಮೀನನ್ನು ಹರಾಜಿನಲ್ಲಿ ಮಾರಾಟಮಾಡಿ ಬಂದ ಹಣ ಫಿಕ್ಸೆಡ್‌ಡಿಪಾಸಿಟ್ ಮಾಡಲು ತೀರ್ಮಾನಿಸಲಾಯಿತು.

*　*　*　*

ತಿ. ತಿ. ದೇ. ಪಂಚಾಂಗ ಕರ್ತ ಶ್ರೀ ತಂಗಿರಾಲ ಚಿನ್ನ ಹನುಮತ್ಸಿಂದ್ಧಾಂತಿ ಅವರ ವಾರ್ಷಿಕ ಸಂಭಾವನೆಯನ್ನು ರೂ. 2116 ನಿಂದ ರೂ. 3000 ಕ್ಕೆ ಏರಿಸಲು ತೀರ್ಮಾನಿಸಲಾಯಿತು.

*　*

ಎಸ್. ವಿ. ಬಾಲಮಂದಿರದಲ್ಲಿ ಬಾಲಕ ಬಾಲಕಿಯರ ಸೇರ್ಪಡೆಯ ಹೊಸ ನಿಬಂಧನೆಗಳನ್ನು ಅನುಮೋದಿಸಲಾಯಿತು, ಅವುಗಳೆಂದರೆ;

1. ಬಾಲಮಂದಿರದ ಆಶ್ರಿತ ವಿದ್ಯಾರ್ಥಿಗಳ ಸಂಖ್ಯೆ 200 ಕ್ಕೆ ಮೀರಬಾರದು.

2. ಹಿಂದೂ ಧರ್ಮದ 5 ರಿಂದ 7 ವರ್ಷದೊಳಗಿನ ವರಿಗೆ ಮಾತ್ರ ಸೇರ್ಪಡೆಯವಕಾಶ.

3. ತಂದೆ ತಾಯಿಗಳಿಲ್ಲದ, ಅಥವಾ ತಾಯಿಯಿದ್ದೂ ಮಗುವನ್ನು ಪೋಷಿಸಲಾಗದ ಸ್ಥಿತಿಯಲ್ಲಿ ಸೇರ್ಪಡೆಗೆ ಅವಕಾಶ.

4. ಆಶ್ರಿತರಿಗೆ ಟೈಲರಿಂಗ್, ನೂಲುವಿಕೆ, ಕಸೂತಿ ಆಟೋಮೊಬೈಲ್, ಮುದ್ರಣಗಳಲ್ಲಿ ರಾಜಾ ದಿನಗಳಲ್ಲಿ ತರಬೇತಿ ನೀಡಲಾಗುವುದು.

5. 18 ವರ್ಷಗಳ ತುಂಬುತ್ತಲೇ ಅವರನ್ನು ಬಾಲಮಂದಿರದಿಂದ ಹೊರಗೆ ಕಳುಹಿಸಲಾಗುವುದು. ಈ ಹೊರ ಹಾಕುವಿಕೆ ಆತ/ಆಕೆ ಯಾವುದೇ ವಾರ್ಷಿಕ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೆ ಅಥವಾ ಪರೀಕ್ಷೆಗೆ ಕೂಡದಿದ್ದರೂ ಜಾರಿಗೆ ಬರುವುದು.

*　*　*　*

ತಿ. ತಿ. ದೇ. ಉದ್ಯೋಗಿಗಳ ಸಹಕಾರ ಬ್ಯಾಂಕಿನ ಶೇವಣಿಯನ್ನು ಎರಡೂವರೆ ಲಕ್ಷ ರೂಗಳಿಂದ ಹತ್ತು ಲಕ್ಷರೂಗಳಿಗೆ ಏರಿಸಲು ತೀರ್ಮಾಸಲಾಗಿದ್ದು ಸಂಬಂಧ ಪಟ್ಟ ನಿಯಮಗಳನ್ನು ಸವರಿಸಲು ಸರಕಾರವನ್ನು ಬೇಡಲು ತೀರ್ಮಾನಿಸಲಾಯಿತು.

*　*　*　*

ಗುಂಟೂರು ಜಿಲ್ಲೆಯ ಪುಲಗಂಪಾಡುವಿನ ಸೀತಾ ಸಾಗರಂನಲ್ಲಿ ಶ್ರೀ ಶ್ರೀ ರಾಮಾನುಜ ಜೀಯರ್ ಅವರ ಆಶೀರ್ವಾದದಿಂದ ಆರಂಭಿಸಲ್ಪಟ್ಟ ವೇದಪಾಠಶಾಲೆ ಅಧ್ಯಾಪಕರಿಗೆ ವರ್ಷಕ್ಕೆ 500 ರೂಗಳಂತೆಯೂ, ವಿದ್ಯಾರ್ಥಿಗಳಿಗೆ ವರ್ಷಕ್ಕೆ 200 ರೂಗಳಂತೆಯೂ ಅನುದಾನ ನೀಡಲು ತೀರ್ಮಾನಿಸಲಾಯಿತು.

*　*　*　*

ತಿ. ತಿ. ದೇ. ಗಳಲ್ಲಿ ಕನ್ಸಾಲಿಡೇಟೆಡ್ ಪೇಯಲ್ಲಿ ಕೆಲಸ ಮಾಡುತ್ತಿರುವರ ಸಂಬಳವನ್ನು 25% ಹೆಚ್ಚಿಸಲು ತೀರ್ಮಾನಿಸಲಾಯಿತು.

*　*　*　*

ತಿ. ತಿ. ದೇ. ಯಲ್ಲಿನ ಸೀನಿಯರ್ ಮೆಡಿಕಲ್ ಆಫೀಸರ್ ಹಾಗೂ ಮೆಡಿಕಲ್ ಆಫೀಸರ್ ಹುದ್ದೆಗಳ ನಡುವೆ ಮಧ್ಯವರ್ತಿಯಾಗಿ ಡೆಪ್ಯೂಟಿ ಸಿವಿಲ್ ಸರ್ಜನ್ ಹುದ್ದೆಯನ್ನು ಸೇರಿಸಲು ತೀರ್ಮಾನಿಸಲಾಯಿತು.

# ವಾರ್ತಾಲಹರಿ

## ಆದಿಚುಂಚನಗಿರಿಯಲ್ಲಿ ಸಂಸ್ಕೃತ ಸಮ್ಮೇಳನ

ಅಕ್ಟೋಬರ್ ೮, ೯ ಹಾಗೂ ೧೦ನೇ ದಿನಾಂಕಗಳಲ್ಲಿ ಐದನೆಯ ಅಖಿಲ ಕರ್ನಾಟಕ ಸಂಸ್ಕೃತ ಸಮ್ಮೇಳನವು ನಾಗಮಂಗಲ ತಾ॥ ನ ಶ್ರೀ ಆದಿ–ಚುಂಚನಗಿರಿಕ್ಷೇತ್ರದ ವೇದವ್ಯಾಸ ಮಂಟಪದಲ್ಲಿ ಸವೈಭವವಾಗಿ ಜರುಗಿತು.

ಸಮ್ಮೇಳನವನ್ನು ಉದ್ಘಾಟಿಸಿದ ಕರ್ಣಾಟಕದ ರಾಜ್ಯಪಾಲ ಅ. ನಾ. ಬ್ಯಾನರ್ಜಿಯವರು "ಎಲ್ಲ ಭಾಷೆಗಳಿಗೂ ಸ್ಫೂರ್ತಿಬಿಂದುವಾದ ಹಾಗೂ ಅತ್ಯಂತ ಶ್ರೀಮಂತವೆನಿಸಿದ ಸಂಸ್ಕೃತಭಾಷೆಯ ಅಧ್ಯಯನವು ಸಮಗ್ರದೇಶದಲ್ಲಿ ಬಲಗೊಳ್ಳಬೇಕು" ಎಂದು ಪ್ರತಿಪಾದಿಸಿದರು. ವಿಖ್ಯಾತ ಕನ್ನಡ–ಸಂಸ್ಕೃತ ವಿದ್ವಾಂಸ ಶ್ರೀ ಎಚ್. ರಂಗನಾಥ ಶರ್ಮಾರವರು ಸಮ್ಮೇಳನಾಧ್ಯಕ್ಷರಾಗಿದ್ದು ಸಂಸ್ಕೃತವು ಈಗ ಪರ್ವಕಾಲದಲ್ಲಿದೆ. ಹಳ್ಳಿ–ಹಳ್ಳಿಯಲ್ಲೂ ಸಂಸ್ಕೃತ ಚಟುವಟಿಕೆಗಳು ವಿಸ್ತರಿಸಬೇಕಾದ ಕಾಲವು ಈಗ ನಮಗೆ ಒದಗಿದೆ. ಈ ಸವಾಲನ್ನು ಸಂಸ್ಕೃತಜ್ಞರು ಸ್ವಾಗತಿಸಬೇಕೆಂದು ನುಡಿದರು. ಶ್ರೀ ಕ್ಷೇತ್ರದ ಶ್ರೀ ಶ್ರೀ ಬಾಲಗಂಗಾಧರನಾಥಸ್ವಾಮೀಜಿಯವರು ಆಶೀರ್ವಚನಗಳನ್ನು ಅನುಗ್ರಹಿಸಿದರು. ಸುತ್ತೂರು ಮಠಾಧೀಶರಾದ ಶ್ರೀ ಶ್ರೀ ಶಿವರಾತ್ರಿರಾಜೇಂದ್ರ ಸ್ವಾಮೀಜಿಯವರು ಪರಿಷತ್ತಿನ ನಾಲ್ಕು ಪ್ರಕಟಣೆಗಳನ್ನು ಪ್ರಕಾಶನಗೊಳಿಸಿದರು.

ವ್ಯವಹಾರ ಸಂಸ್ಕೃತಗೋಷ್ಠಿ, ಸಾಹಿತ್ಯಗೋಷ್ಠಿ, ಮಹಿಳಾಗೋಷ್ಠಿ, ಸಮಸ್ಯಾಪೂರ್ತಿಗೋಷ್ಠಿ, ಸಂಘಟನಾ ಹಾಗೂ ಶಿಕ್ಷಣಗೋಷ್ಠಿಗಳು ಅಂದು ಹಾಗೂ ಮರುದಿನಗಳಲ್ಲಿ ನಡೆದವು.

ಸಂಸ್ಕೃತ–ಸಂಸ್ಕೃತಿ ಕ್ಷೇತ್ರಗಳಲ್ಲಿ ವಿಶಿಷ್ಟಸೇವೆಯನ್ನು ಸಲ್ಲಿಸಿದ ಏಳುಮಂದಿ ವಿದ್ವಾಂಸರನ್ನು ಸನ್ಮಾನಿಸಲಾಯಿತು. ಅಖಿಲ ಕರ್ಣಾಟಕ ಸಂಸ್ಕೃತ ಪರಿಷತ್ತಿನ ಅಧ್ಯಕ್ಷರಾದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆಯವರು, ಬೇಲಿಮಠದ ಶ್ರೀ ಶ್ರೀ ಶಿವರುದ್ರಸ್ವಾಮಿಗಳವರೂ ಸಹ ಸಭೆಯನ್ನು ಆಶೀರ್ವದಿಸಿದರು. ಸಮಾರೋಪ ಕಾರ್ಯಕ್ರಮದಲ್ಲಿ ರಾಜ್ಯದ ಸಚಿವ ಎಂ. ಚಂದ್ರಶೇಖರರವರು

ಪಾಲ್ಗೊಂಡಿದ್ದರು. ಸಿದ್ಧಗಂಗಾಮಠಾಧೀಶರಾದ ಶ್ರೀ ಶ್ರೀ ಡಾ॥ ಶಿವಕುಮಾರಸ್ವಾಮಿಗಳವರು ಆಶೀರ್ವಚನಗಳನ್ನು ನೀಡಿದರು.

ಸರ್ವಶ್ರೀ ಕೆ. ಟಿ. ಪಾಂಡುರಂಗಿ, ಗು ಲಾ ಮ ದಸ್ತಗೀರ ಅಹಮ್ಮದ್ (ಬೊಂಬಾಯಿ) ಬಾಲ ಗಣಪತಿಭಟ್ಟ, ಅನಂತಲಕ್ಷ್ಮ ನಟರಾಜನ್ ಇವರೇ ಮೊದಲಾದವರು ಭಾ ಗ ವ ಹಿ ಸಿ ದ ವ ರ ಲ್ಲಿ ಪ್ರಮುಖರು.

## ಸಾರ್ವಜನಿಕರಿಗೆ ವೇದಗಳ ಕ್ಯಾಸೆಟ್‌ಗಳು

ಸಾರ್ವಜನಿಕರು ವೇದಗಳ ಕ್ಯಾಸೆಟ್‌ಗಳನ್ನು ಪಡೆಯಲು ಅನುಕೂಲವಾಗುವಂತೆ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆಯೆಂದು. ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರ ಸ್ವಾಮಿರೆಡ್ಡಿ ನುಡಿದರು.

ತಿ. ತಿ. ದೇ. ಗಳ ರೆಕಾರ್ಡಿಂಗ್ ಸ್ಟುಡಿಯೋದ ಚಾನಲ್ ಮಿಕ್ಸರ್ ಯೂನಿಟ್ ಅನ್ನು ಆರಂಭಿ ಸು ತ್ತಿ ದ್ದ ಕಾರ್ಯನಿರ್ವಹಣಾಧಿಕಾರಿಗಳು ಕ್ಯಾಸೆಟ್‌ಗಳ ಮಾ ರಾ ಟ ದ ವ್ಯ ವ ಸ್ಥೆ ಯ ಉತ್ಪಾದನೆಗಾಗಿ ಹೆಚ್ಚಿನ ಆಧುನಿಕ ತಂತ್ರಜ್ಞಾನ ವನ್ನು ಅಳವಡಿಸಿಕೊಳ್ಳಲಾಗುವುದೆಂದೂ, ಈ ವರೆಗೆ 600 ಗಂಟೆಗಳ ಕಾಲ ನಡೆಯುವ 1200 ಟೇಪುಗಳಲ್ಲಿ ಪ್ರಖ್ಯಾತ ವೇದವಿದರ ವೇದಗಾನ ವನ್ನು ರೆಕಾರ್ಡ್ ಮಾಡಲಾಗಿದೆಯೆಂದರು.

ತಿ.ತಿ.ದೇ.ಗಳ ಈ ರೆಕಾರ್ಡಿಂಗ್ ಸ್ಟುಡಿಯೋದ ಇತಿಹಾಸ ಹಾಗೂ ಪರಿಕರಗಳನ್ನು ಪರಿಶೀಲಿಸಿದ ಆ ಲಿ ಂ ಡಿ ಯಾ ರೇ ಡಿ ಯೋ ದ ಮುಖ್ಯ ಇಂಜನೀಯರ್ ಶ್ರೀ ಎಂ. ಐ. ಸೂರ್ಯ ನಾರಾಯಣ, ಮಾಜಿ ಮುಖ್ಯ ಇಂಜನೀಯರ್ ಶ್ರೀ ಪಿ. ಆರ್. ನರಸಿಂಹಂ, ಪದ್ಮಾವತೀ ಮಹಿಳಾ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಶ್ರೀ ರಂಗಯ್ಯ ನಾಯುಡು ಅವರಗಳು ಇದರ ಪೂರ್ಣ ಬಳಕೆಗೆ ಹಲವಾರು ಮಾರ್ಗಗಳನ್ನು ಸೂಚಿಸಿದರು.

ತಿ. ತಿ. ದೇ. ವಿದ್ಯಾಧಿಕಾರಿ ಶ್ರೀ ಪಿ. ಚಂದ್ರ ಶೇಖರ್ ಅವರು ಸ್ಟುಡಿಯೋದಲ್ಲಿನ ಆಧುನಿಕ ಯಂತ್ರೋಪಕರಣಗಳಿಗಾಗಿ ಕೈ ಗೊಂ ಡಿ ರು ವ ಕ್ರಮಗಳನ್ನು ವಿವರಿಸಿದರು. ಡಾ॥ ಎಂ. ಡಿ. ಬಾಲಸುಬ್ರಹ್ಮಣ್ಯಂ ಅವರು ವಂದನಾರ್ಪಣೆ ಮಾಡಿದರು.



ಶ್ರೀಮತಿ ಇಂದಿರಾಗಾಂಧಿಯವರ ತೈಲಚಿತ್ರದೊಡನೆ ಮೌನ ಮೆರವಣಿಗೆ

## ಶ್ರೀಮತಿ ಗಾಂಧಿಯವರ ಅಕಾಲಿಕ ಮರಣಕ್ಕೆ ಸಂತಾಪಸೂಚನೆ

ನವಂಬರ್ 5 ರಂದು ನಡೆದ ತಿ. ತಿ. ದೇ. ಉದ್ಯೋಗಿಗಳ ಸ ಮಾ ವೇ ಶ ವು ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಸೇರಿ ಶ್ರೀ ಮ ತಿ ಇಂದಿರಾಗಾಂಧಿಯವರ ಅಕಾಲಿಕ ಮರಣಕ್ಕೆ ಸಂತಾಪವನ್ನು ಸೂಚಿಸಿ ಎರಡು ನಿಮಿಷ ಮೌನ ಆಚರಿಸಿತು. ಸಂತಾಪ ಸೂಚನೆಯ ಪೂರ್ಣ ಪಾಠ ಹೀಗಿದೆ. "ಭಾರತದ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರ ದುರಂತ ವಾತಾವರಣದ ದುಃಖದಾಯಕ ನಿಧನವು ನಮ್ಮೆಲ್ಲರನ್ನೂ ಶೋಕ ತಪ್ತರನ್ನಾಗಿಸಿದೆ. ದೇಶಕ್ಕೆ ಶ್ರೀಮತಿ ಗಾಂಧಿ ಯವರು ಸಲ್ಲಿಸಿದ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸುತ್ತ ಪ್ರಧಾನಿಯವರ ಬರ್ಬರ ಹತ್ಯೆಯನ್ನು ಖಂಡಿಸುವಲ್ಲಿ ನಾವೂ ಭಾಗಿಗಳಾಗುತ್ತೇವೆ.

ಅಗಲಿದ ಆತ್ಮಕ್ಕೆ ಶಾಂತಿಯನ್ನು ಕೋರುತ್ತ, ಅವರ ಕುಟುಂಬದ, ಇಡೀ ದೇಶದ, ಈ ನಷ್ಟವನ್ನು ಎದುರಿಸುವ ಸ್ಥೈರ್ಯ, ದೃಢತೆಗಳನ್ನು ನೀಡು ವಂತೆ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ಪ್ರಾರ್ಥಿ ಸುತ್ತೇವೆ.

ನಮ್ಮ ದೇಶವು ಒಬ್ಬ ಶ್ರೇಷ್ಠ ಪ್ರಧಾನಿಯನ್ನು ಕಳೆದುಕೊಂಡಿದೆ. ರಾಷ್ಟ್ರೀಯ ಶೋಕದ ಸಂಕಟದ ಈ ಹೊತ್ತಿನಲ್ಲಿ ಜನರು ಶಾಂತಿ ಸೌಹಾರ್ದ ಗಳನ್ನೂ ಪರಸ್ಪರ ಸಹಭಾವನೆಗಳನ್ನೂ ಕಾಪಾಡ ಬೇಕೆಂದು ನಾವು ಬೇಡಿಕೊಳ್ಳುತ್ತೇವೆ"

ಶೋಕ ಸಭೆಯ ಸಂಬಂಧದಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ಭಾವಚಿತ್ರದೊಂದಿಗೆ ಮೌನ ಮೆರವಣಿಗೆಯೂ ನಡೆಯಿತು.



ಸಂತಾಪ ಸಭೆಯನ್ನುದ್ದೇಶಿಸಿ ಮಾತನಾಡುತ್ತ ಶ್ರೀ ಕುಮಾರಸ್ವಾಮಿರೆಡ್ಡಿ

ಮುಂದಿನ ಸಂಚಿಕೆಯಲ್ಲಿ .... .... ....

## ಸಪ್ತಗಿರಿ ಡಿಸೆಂಬರ್ — 1984

**ಭಗವದ್ಗೀತೆ ಯಾರಿಗೆ?**
–ಡಾ॥ ಎಸ್. ಬಿ. ರಘುನಾಥಾಚಾರ್ಯ

**ಗೀತಾರ್ಥ ಸಾರಂ**
–ಕಂದಾಡೈ ಕೇಶವನ್

**ಮನೆಯ ಮೊದಲ ಪಾಠಶಾಲೆ**
–ಮತ್ತೀಗೆರೆ ಅನಂತು

**ನಟರಾಜನಡಿದಾವರೆಯಲ್ಲಿ**
–ವಿದ್ವಾನ್ ಬ.ನ. ಗುಂಡೂರಾವ್

**ಶಕಪುರುಷ ಶಾಲಿವಾಹನ**
– ಕೆ. ಜಗನ್ನಾಥ ಶಾಸ್ತ್ರಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ·

## 1984
## ಡಿಸೆಂಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 4 | ಮಂಗಳವಾರ | ಗೀತಾಜಯಂತಿ |
| 5 | ಬುಧವಾರ | ಚಕ್ರತೀರ್ಥ ಮುಕ್ಕೋಟಿ |
| 6 | ಗುರುವಾರ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕೃತ್ತಿಕಾ ದೀಪೋತ್ಸವ |
| 7 | ಶುಕ್ರವಾರ | ತಿರುಮಂಗೈಯಾಳ್ವಾರ್ ಶಾತ್ತುಮೊರೆ |
| 8 | ಶನಿವಾರ | ತಿರುಪ್ಪಾಣಾಳ್ವಾರ್ ವರ್ಷ ತಿರುನಕ್ಷತ್ರ, ದತ್ತಾತ್ರೇಯ ಜಯಂತಿ, ಕಪಿಲತೀರ್ಥ ಮುಕ್ಕೋಟಿ. |
| 15 | ಶನಿವಾರ | ಧನುರ್ಮಾಸ ಪೂಜಾಪ್ರಾರಂಭ |
| 21 | ಶುಕ್ರವಾರ | ತೊಂಡರಡಿಪ್ಪೊಡಿಯಾಳ್ವಾರ್ ವರ್ಷ ತಿರುನಕ್ಷತ್ರ |
| 23 | ಭಾನುವಾರ | ತಿರುಮಲೆಯಲ್ಲಿ ಅಧ್ಯಯನೋತ್ಸವಾರಂಭ. |

## ರಕ್ಷಾಪತ್ರ ಚಿತ್ರಸೂಚಿ

ಮುಖಪುಟ : ದಿವಂಗತ ಶ್ರೀಮತಿ ಇಂದಿರಾಗಾಂಧಿ.

ಹಿಂಬದಿಯಪುಟ : ತಿರುಚಾನೂರಿನ ಶ್ರೀ ಪದ್ಮಾವತಿ ಅಮ್ಮನವರ ದೇವಾಲಯದ ಚಕ್ರ ತೀರ್ಥದ ಒಂದು ದೃಶ್ಯ.

ಒಳಪುಟಗಳಲ್ಲಿ :

1. ತಿರುಮಲೆಯ ದೇವಸ್ಥಾನದೊಳಗೆ ಶ್ರೀಮತಿ ಗಾಂಧಿ.
2. 1972 ರ ಸಂದರ್ಶನದಲ್ಲಿ ಸ್ವಾಮಿಯ ಆಭರಣಗಳನ್ನು ವೀಕ್ಷಿಸುತ್ತ ಶ್ರೀಮತಿ ಇಂದಿರಾಗಾಂಧಿ, ಅಂದಿನ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಂ.ಚಂದ್ರಮೌಳಿ ರೆಡ್ಡಿ.
3. ಸ್ವಾಮಿ ಅಭಿಷೇಕದಲ್ಲಿ ಜೀಯರ್ ಗಳೊಂದಿಗೆ.
4. 1979 ರ ಸಂದರ್ಶನದಲ್ಲಿ ತಿ. ತಿ. ದೇ. ಬೋರ್ಡ್ ಸದಸ್ಯರುಗಳೊಂದಿಗೆ.

5. 1979 ರ ಸಂದರ್ಶನದಲ್ಲಿ ಸ್ವಾಮಿ ಅಭಿಷೇಕದಲ್ಲಿ ಆಂಧ್ರಪ್ರದೇಶದ ಆಗಣ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣ ಕುಮಾರ್, ಆಗಣ ದೇವಾಲಯದ ಇಲಾಖಾ ಮಂತ್ರಿ ಶ್ರೀ ಪಿ. ವಿ. ಚೌದರಿ, ಶ್ರೀ ಪಿ. ವಿ. ನರಸಿಂಹರಾವ್ (ಇಂದಿನ ಕೇಂದ್ರ ಗೃಹ ಮಂತ್ರಿ), ಆಗಿನ ಮುಖ್ಯಮಂತ್ರಿ ಡಾ॥ ಚೆನ್ನಾರೆಡ್ಡಿ ಅವರೊಂದಿಗೆ.

5. ತಿ. ತಿ. ದೇ. ಫಲಪುಷ್ಪ ಪ್ರದರ್ಶನದಲ್ಲಿ ಪುಸ್ತಕ ಬಿಡುಗಡೆ ಮಾಡುತ್ತ ಶ್ರೀಮತಿ ಇಂದಿರಾಗಾಂಧಿ.

7. 1981 ರಲ್ಲಿ ತಿ. ತಿ. ದೇ. ಪ್ರಕಟನೆಗಳ ಬಿಡುಗಡೆಯಲ್ಲಿ.
8. 1982 ರಲ್ಲಿನ ತಿರುಮಲೆಯ ಸಂದರ್ಶನ, ಕೇಂದ್ರ ಮಂತ್ರಿ ಶ್ರೀ ವಿಜಯಭಾಸ್ಕರ ರೆಡ್ಡಿ ಹಾಗೂ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಇವರೊಂದಿಗೆ.
9. ವಿಜಯನಗರ ಮಹಾರಾಯರ ಕಂಚಿನ ವಿಗ್ರಹಗಳನ್ನು ಗಮನಿಸುತ್ತ ಶ್ರೀಮತಿ ಇಂದಿರಾಗಾಂಧಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

